| ಕ್ರ.ಸಂ. | | ಪ್ರಕರಣ. ಸಂ | ಜಿಲ್ಲೆಯ ಹೆಸರು | ಮಾಹೆ | ವಶಪಡಿಸಿಕೊಳ್ಳಲಾದ ದಸ್ತುವಿನ ವಿವರ (ಕ್ವಿಂ. ಗಳಲ್ಲಿ) | | | | ಕೈಗೊಳ್ಳಲಾದ ಕ್ರಮ | ಎಫ್‌ಐಆರ್ ಸಂಖ್ಯೆ ಮತ್ತು ದಿನಾಂಕ | ವ್ಯಕ್ತಿಯ ಹೆಸರು ವಿಳಾಸ | ಬಂಧಿತರ ಸಂಖ್ಯೆ | ಪ್ರಕರಣವು ಪ್ರಸ್ತುತ ಯಾವ ಹಂತದಲ್ಲಿದೆ, ವಿವರ ನೀಡುವುದು. |
|---|---|---|---|---|---|---|---|---|---|---|---|---|---|
| | | | | | ಅಕ್ಕಿ | ಗೋಧಿ | ಸಕ್ಕರೆ | ವಾಹನ ಸಂಖ್ಯೆ ಇತ್ಯಾದಿ | | | | | |
| | 100 | - | ಬೆಂಗಳೂರು ಗ್ರಾಮಾಂತರ | ಏಪ್ರಿಲ್-2020 | | - | - | - | - | - | - | | - |
| | 101 | 01/2020-21 | ಬೆಂಗಳೂರು ಗ್ರಾಮಾಂತರ | ಮೇ-2020 | 0.79 | - | - | - | ಜಿಲ್ಲಾಧಿಕಾರಿಗಳು ಸದರಿ ದಾಸ್ತಾನನ್ನು ವಶಕ್ಕೆ ಪಡೆದು ಸಾರ್ವಜನಿಕ ಪಡಿತರ ವಿತರಿಸಲು ಆದೇಶಿಸಿರುತ್ತಾರೆ. | - | - | | ಅಗತ್ಯ ವಸ್ತುಗಳ ಕಾಯ್ದೆ-1955 ರ ಕ್ಲಾಸ್ 6 'ಎ' ಸಬ್ ಕ್ಲಾಸ್ 2 ರಡಿಯಲ್ಲಿ ಸರ್ಕಾರದ ವಶಕ್ಕೆ ಪಡೆದು, ವಶಪಡಿಸಿಕೊಂಡಿರುವ 79 ಕೆ.ಜಿ ಅಕ್ಕಿಯು ಹಾಳಾಗುವ ಸಂಭವವಿರುವುದರಿಂದ ದಾಸ್ತಾನನ್ನು |
| 9 | 102 | | ಬೆಳಗಾವಿ | ಏಪ್ರಿಲ್ | 15 | - | - | - | ಶ್ರೀ ರಿಯಾಜತ್ ಕಾಸಿಮಸಾಬ ಶೇಖ, ಶಹಾಪೂರ ಪೊಲೀಸ ಠಾಣೆ ಬೆಳಗಾವಿ ಒಪ್ಪಿಸಲಾಗಿದೆ. | 24/2020 | ಶ್ರೀ ರಿಯಾಜತ್ ಕಾಸಿಮಸಾಬ ಶೇಖ, ದೇವಾಂಗ ನಗರ 1ನೇ ಕ್ರಾಸ ವಡಗಾಂವ. ಬೆಳಗಾವಿ | 1 | ಜೆ.ಎನ್.ಎಂ.ಸಿ ನ್ಯಾಯಾಲಯದಲ್ಲಿ ವಿಚಾರಣೆಯಲ್ಲಿರುತ್ತದೆ. |
| | 103 | | ಬೆಳಗಾವಿ | ಮೇ | 60 | - | - | - | ಶ್ರೀಕುಮಾರ ಸಂಗಪ್ಪ ಪಡಸಲಗಿ ಸಾ:ಅನಂತಪೂರ. ತಾ:ಅಥಣಿ ಅಥಣಿ ಪೊಲೀಸ ಠಾಣೆ ಅಥಣಿ ಒಪ್ಪಿಸಲಾಗಿದೆ. | 169/2020 | ಶ್ರೀಕುಮಾರ ಸಂಗಪ್ಪ ಪಡಸಲಗಿ ಸಾ:ಅನಂತಪೂರ ತಾ:ಅಥಣಿ | 1 | ಜೆ.ಎನ್.ಎಂ.ಸಿ ನ್ಯಾಯಾಲಯದಲ್ಲಿ ವಿಚಾರಣೆಯಲ್ಲಿರುತ್ತದೆ |
| | 104 | | ಬೆಳಗಾವಿ | ಮೇ | 27.56 | - | - | ಕೆಎ-48 ಎ-0956 | ಪ್ರಶಾಂತ ತಮ್ಮಣ್ಣ ನಾಂದ್ರೇಕರ ಸಾ:ಸಾವಳಗಿ ತಾ:ಜಮಖಂಡಿ. ಜಗಳ ಪೊಲೀಸ ಠಾಣೆಗೆ ಒಪ್ಪಿಸಲಾಗಿದೆ. | 68/2020 | ಪ್ರಶಾಂತ ತಮ್ಮಣ್ಣ ನಾಂದ್ರೇಕರ ಸಾ:ಸಾವಳಗಿ ತಾ:ಜಮಖಂಡಿ. | 1 | ಜೆ.ಎನ್.ಎಂ.ಸಿ ನ್ಯಾಯಾಲಯದಲ್ಲಿ ವಿಚಾರಣೆಯಲ್ಲಿರುತ್ತದೆ |
| | 105 | | ಬೆಳಗಾವಿ | ಜೂನ | 13.56 | - | - | - | ಆಶಿಫ್ ಮುಸ್ಲುದ್ದಿನ ಕಿಲ್ಲೇದಾರ ನಿಜಾಮಿಯಾ ನಗರ 4ನೇ ಕ್ರಾಸ ವಡಗಾಂವ ಶಹಾಪೂರ ಪೊಲೀಸ ಠಾಣೆ ಬೆಳಗಾವಿ ಒಪ್ಪಿಸಲಾಗಿದೆ. | 32/2020 | ಆಶಿಫ್ ಮುಸ್ಲುದ್ದಿನ ಕಿಲ್ಲೇದಾರ ನಿಜಾಮಿಯಾ ನಗರ 4ನೇ ಕ್ರಾಸ ವಡಗಾಂವ | 1 | ಜೆ.ಎನ್.ಎಂ.ಸಿ ನ್ಯಾಯಾಲಯದಲ್ಲಿ ವಿಚಾರಣೆಯಲ್ಲಿರುತ್ತದೆ |
| | 106 | | ಬೆಳಗಾವಿ | ಜೂನ | 25 | - | - | ಕೆಎ-49 3956 ಮತ್ತು ಕೆಎ-24 ಎ-1401 | ರವಿ ಮಲ್ಲಿಕಾರ್ಜುನ ಗಾಣಿಗೇರ ಕೈತನಾಳ ತಾ:ಗೋಕಾಕ ಮತ್ತು ಬಾಲನಗೌಡ ಶಿವನಗೌಡ ಪಾಟೀಲ ಸಾ:ಮಲ್ಲಾಪೂರ ಪಿ.ಜಿ.ತಾ: ಬೈಲಹೊಂಗಲ | 49/2020 | ರವಿ ಮಲ್ಲಿಕಾರ್ಜುನ ಗಾಣಿಗೇರ ಕೈತನಾಳ ತಾ:ಗೋಕಾಕ ಮತ್ತು ಬಾಲನಗೌಡ ಶಿವನಗೌಡ ಪಾಟೀಲ ಸಾ:ಮಲ್ಲಾಪೂರ ಪಿ.ಜಿ.ತಾ: ಬೈಲಹೊಂಗಲ | 2 | ಜೆ.ಎನ್.ಎಂ.ಸಿ ನ್ಯಾಯಾಲಯದಲ್ಲಿ ವಿಚಾರಣೆಯಲ್ಲಿರುತ್ತದೆ |

| ಕ್ರ.ಸಂ. | | ಪ್ರಕರಣ, ಸಂ | ಜಿಲ್ಲೆಯ ಹೆಸರು | ಮಾಹೆ | ವಶಪಡಿಸಿಕೊಳ್ಳಲಾದ ವಸ್ತುವಿನ ವಿವರ (ಕ್ವಿಂ. ಗಳಲ್ಲಿ) | | | | ಕೈಗೊಳ್ಳಲಾದ ಕ್ರಮ | ಎಫ್ಐಆರ್ ಸಂಖ್ಯೆ ಮತ್ತು ದಿನಾಂಕ | ವ್ಯಕ್ತಿಯ ಹೆಸರು ವಿಳಾಸ | ಬಂಧಿಸಿದವರ ಸಂಖ್ಯೆ | ಪ್ರಕರಣವು ಪ್ರಸ್ತುತ ಯಾವ ಹಂತದಲ್ಲಿದೆ, ವಿವರ ನೀಡುವುದು. |
|---|---|---|---|---|---|---|---|---|---|---|---|---|---|
| | | | | | ಅಕ್ಕಿ | ಗೋಧಿ | ಸಕ್ಕರೆ | ವಾಹನ ಸಂಖ್ಯೆ ಇತ್ಯಾದಿ | | | | | |
| | 107 | 6 | ಬೆಳಗಾವಿ | ಆಗಸ್ಟ | 180.36 | - | - | ಎಂಎಚ್-09 ಇಎಮ್-9527 | ವಾಸುಕಹಾ ರಿಯಾಜಿಶ್ ಶೇಖ ಮತ್ತು ಕುಮಾರ ಮಹಾದೇವ ವಾಘಮೋರೆ ಸಾ:ಯಶವಂತರಾವ ಮೋಹಿತೆ ನಗರ ಕಾರಖಾನೆ ಕಾಲೋನಿ ಕಾಗಲ | 164/2020 | ವಾಸುಕಹಾ ರಿಯಾಜಿಶ್ ಶೇಖ ಮತ್ತು ಕುಮಾರ ಮಹಾದೇವ ವಾಘಮೋರೆ ಸಾ:ಯಶವಂತರಾವ ಮೋಹಿತೆ ನಗರ ಕಾರಖಾನೆ ಕಾಲೋನಿ | 3 | ಜೆ.ಎಮ್.ಎಫ್.ಸಿ ನ್ಯಾಯಾಲಯದಲ್ಲಿ ವಿಚಾರಣೆಯಲ್ಲಿರುತ್ತದೆ |
| 10 | 108 | ಇಡಿಐ/ಆಪಿ/03/2020 | ಕೋಲಾರ ಜಿಲ್ಲೆ | ಜೂನ್ | 50 | - | - | 1.ಎಂಡಿ8-9396 ವಿಂಪಿಂ 407 ಪಿಕಪ್, 2.ಎಂಡಿ8-9916 [illegible] | - | ಅಂಚು ಓಂ 0132/2020 ಆಗ-20.06.2020 | ನಸ್ರುಲ್ಲಾ ಖಾನ್ ಬಿನ್ ಬಷೀರ್ ಖಾನ್ ಸಿತನಾಯಕನಹಳ್ಳಿ, ಲಕ್ಕೂರು ಹೋಬಳಿ, ಮಾಲೂರು ತಾಲ್ಲೂಕು. | 1 | ಪ್ರಕರಣವು ಮಾನ್ಯ ಜಿಲ್ಲಾಧಿಕಾರಿಗಳ ನ್ಯಾಯಾಲಯದಲ್ಲಿ ವಿಚಾರಣ ಹಂತದಲ್ಲಿರುತ್ತದೆ. |
| 11 | 109 | ಇಸಿಕಾಯ್ದೆ/01/2020-21 | ಕಲಬುರಗಿ | ಏಪ್ರಿಲ್-2020 | 187.22 | 72.68 | 0.00 | KA-32 D-3307 | ಪ್ರಕರಣದಲ್ಲಿ ಜಪ್ತಿ ಮಾಡಿದ ಅಕ್ಕಿ & ಗೋಧಿಯನ್ನು, ಕಲಬುರಗಿ(ಪ) ಸಗಟು ಗೋದಾಮಿನಲ್ಲಿ ಮುಂದಿನ ಆದೇಶದವರೆಗೆ ಜಮಾ ಇಡಲಾಗಿರುತ್ತದೆ. ಹಾಗೂ ಪ್ರಕರಣದಲ್ಲಿ ಜಪ್ತಿ ಮಾಡಿದ ವಾಹನವನ್ನು, ಪೊಲೀಸ್ ಠಾಣೆಯಲ್ಲಿ ಮುಂದಿನ ಆದೇಶದ ವರೆಗೆ ಇಡಲಾಗಿರುತ್ತದೆ. ಪ್ರಕರಣದಲ್ಲಿ ಸಂಬಂಧಪಟ್ಟವರಿಗೆ ಕಾರಣ ಕೇಳುವ ನೋಟಿಸು ಜಾರಿ | ಗುನ್ಹೆ ಸಂಖ್ಯೆ: 49/2020 ದಿನಾಂಕ: 13.04.2020 | 1. ಶ್ರೀ ರೇವಣಸಿದ್ದಪ್ಪ ಮಹಾಜನ ಸಾ:ರೇವಣಸಿದ್ದೇಶ್ವರ ಕಾಲೋನಿ, ಕಲಬುರಗಿ 2. ಮಹಮ್ಮದ್ ಗೌಸ, ಕಲಬುರಗಿ 3. ಚಾಂದಪಾ ತಂದೆ ತಾಹೇರ್ ಅಲಿ (ವಾಹನ ಚಾಲಕ) ಸಾ:ಮಿಸಬಾ ನಗರ, ಕಲಬುರಗಿ 4. ರಾಮಲಿಂಗೇಶ್ವರ | 4 | ಸದರಿ ಪ್ರಕರಣವು ವಿಚಾರಣೆ ಹಂತದಲ್ಲಿರುತ್ತದೆ. |
| | 110 | ಇಸಿಕಾಯ್ದೆ/02/2020-21 | ಕಲಬುರಗಿ | ಏಪ್ರಿಲ್-2020 | 207.10 | 0.00 | 0.00 | GJ-03 BW-9995 | ಪ್ರಕರಣದಲ್ಲಿ ಜಪ್ತಿ ಮಾಡಿದ ಅಕ್ಕಿಯನ್ನು, ಜೇವರ್ಗಿ ಸಗಟು ಗೋದಾಮಿನಲ್ಲಿ ಮುಂದಿನ ಆದೇಶದವರೆಗೆ ಜಮಾ ಇಡಲಾಗಿರುತ್ತದೆ. ಹಾಗೂ ಪ್ರಕರಣದಲ್ಲಿ ಜಪ್ತಿ ಮಾಡಿದ | ಗುನ್ಹೆ ಸಂಖ್ಯೆ: 78/2020 ದಿನಾಂಕ: 27.04.2020 | 1. ಜಗದೀಶ್ ತಂದೆ ಮಲ್ಲಿಕಾರ್ಜುನ ಬಿರಾದಾರ್ ಸಾ:ಕಲಬುರಗಿ 2. ಸೋಯೆಲ್ ತಂದೆ ಹಾಜಿ ತಾರಖಿವಾಡಿಯಾ (ಲಾರಿ ಚಾಲಕ). | 4 | ಸದರಿ ಪ್ರಕರಣವು ವಿಚಾರಣೆ ಹಂತದಲ್ಲಿರುತ್ತದೆ. |
| | 111 | ಇಸಿಕಾಯ್ದೆ/04/2020-21 | ಕಲಬುರಗಿ | ಮೇ-2020 | 249.69 | 0.00 | 0.00 | KA-32 D-3304 | ಪ್ರಕರಣದಲ್ಲಿ ಜಪ್ತಿ ಮಾಡಿದ ಅಕ್ಕಿಯನ್ನು, ಕಲಬುರಗಿ(ಪ) ಸಗಟು ಗೋದಾಮಿನಲ್ಲಿ ಮುಂದಿನ ಆದೇಶದವರೆಗೆ ಜಮಾ ಇಡಲಾಗಿರುತ್ತದೆ. ಹಾಗೂ ಪ್ರಕರಣದಲ್ಲಿ ಜಪ್ತಿ ಮಾಡಿದ ವಾಹನವನ್ನು, ಪೊಲೀಸ್ ಠಾಣೆಯಲ್ಲಿ ಮುಂದಿನ ಆದೇಶದ ವರೆಗೆ ಇಡಲಾಗಿರುತ್ತದೆ | ಗುನ್ಹೆ ಸಂಖ್ಯೆ: 34/2020 ದಿನಾಂಕ: 14.05.2020 | 1. ಶ್ರೀ ರೇವಣಸಿದ್ದಯ್ಯ ತಂದೆ ಕಲ್ಲಯ್ಯ, ಮಾಲೀಕರು ಶ್ರೀ ಶಕ್ತಿ ಟ್ರೇಡಿಂಗ್ ಕಂಪನಿ, ಪ್ಲಾಟ್‌ನಂ:192 ಕಾಟನ್ ಮಾರ್ಕೆಟ್, ಎಪಿಎಂಸಿ ಯಾರ್ಡ್ ಕಲಬುರಗಿ 2. ಶ್ರೀ ಗುಂಡಪ್ಪ ತಂದೆ [illegible] | 2 | ಸದರಿ ಪ್ರಕರಣವು ವಿಚಾರಣೆ ಹಂತದಲ್ಲಿರುತ್ತದೆ. |
| | 112 | ಇಸಿಕಾಯ್ದೆ/05/2020-21 | ಕಲಬುರಗಿ | ಮೇ-2020 | 130.72 | 0.00 | 0.00 | 0 | ಪ್ರಕರಣದಲ್ಲಿ ಜಪ್ತಿ ಮಾಡಿದ ಅಕ್ಕಿಯನ್ನು, ಕಲಬುರಗಿ(ಪ) ಸಗಟು ಗೋದಾಮಿನಲ್ಲಿ ಮುಂದಿನ ಆದೇಶದವರೆಗೆ ಜಮಾ ಇಡಲಾಗಿರುತ್ತದೆ. ಪ್ರಕರಣದಲ್ಲಿ ಸಂಬಂಧಪಟ್ಟವರಿಗೆ ಕಾರಣ ಕೇಳುವ ನೋಟಿಸು ಜಾರಿ ಮಾಡಲಾಗಿರುತ್ತದೆ. | ಗುನ್ಹೆ ಸಂಖ್ಯೆ: 35/2020 ದಿನಾಂಕ: 14.05.2020 | ವಿಜಯಕುಮಾರ ಜಿ. ರುದ್ರವಾಡಿ, ಜೈ ಲಕ್ಷ್ಮೀ ಟ್ರೇಡರ್ಸ್ ಪ್ಲಾಟ್‌ನಂ:206 ಕಾಟನ್ ಮಾರ್ಕೆಟ್, ಎಪಿಎಂಸಿ ಯಾರ್ಡ್ ಕಲಬುರಗಿ | 1 | ಸದರಿ ಪ್ರಕರಣವು ವಿಚಾರಣೆ ಹಂತದಲ್ಲಿರುತ್ತದೆ. |
| | 113 | ಇಸಿಕಾಯ್ದೆ/06/2020-21 | ಕಲಬುರಗಿ | ಮೇ-2020 | 741.13 | 0.00 | 0.00 | 0 | ಪ್ರಕರಣದಲ್ಲಿ ಜಪ್ತಿ ಮಾಡಿದ ಅಕ್ಕಿಯನ್ನು, ಕಲಬುರಗಿ(ಪ) ಸಗಟು ಗೋದಾಮಿನಲ್ಲಿ ಮುಂದಿನ ಆದೇಶದವರೆಗೆ ಜಮಾ ಇಡಲಾಗಿರುತ್ತದೆ. ಪ್ರಕರಣದಲ್ಲಿ ಸಂಬಂಧಪಟ್ಟವರಿಗೆ ಕಾರಣ | ಗುನ್ಹೆ ಸಂಖ್ಯೆ: 36/2020 ದಿನಾಂಕ: 14.05.2020 | ಶ್ರೀ ಮಾಣಿಕಂಠ ರಾಠೋಡ, ಮಾಲೀಕರು ಶ್ರೀ ಲಕ್ಷ್ಮೀ ತಿಮ್ಮಪ್ಪಸ್ವಾಮಿ ಟ್ರೇಡಿಂಗ್ ಮತ್ತು ಜನರಲ್ ಮರ್ಚಂಟ್ ಮನೆ ನಂ:8/1545 ಜ-1 | 1 | ಸದರಿ ಪ್ರಕರಣವು ವಿಚಾರಣೆ ಹಂತದಲ್ಲಿರುತ್ತದೆ. |
| | 114 | ಇಸಿಕಾಯ್ದೆ/07/2020-21 | ಕಲಬುರಗಿ | ಜೂನ್-2020 | 292.50 | 0.00 | 0.00 | KA-32 D-0057 | ಪ್ರಕರಣದಲ್ಲಿ ಜಪ್ತಿ ಮಾಡಿದ ಅಕ್ಕಿಯನ್ನು, ಆಳಂದ ಸಗಟು ಗೋದಾಮಿನಲ್ಲಿ ಮುಂದಿನ ಆದೇಶದವರೆಗೆ ಜಮಾ ಇಡಲಾಗಿರುತ್ತದೆ. ಹಾಗೂ ಪ್ರಕರಣದಲ್ಲಿ ಜಪ್ತಿ ಮಾಡಿದ | ಗುನ್ಹೆ ಸಂಖ್ಯೆ: 99/2020 ದಿನಾಂಕ: 15.06.2020 | 1. ಶ್ರೀ ಮಾಣಿಕಂಠ ರಾಠೋಡ, ಮಾಲೀಕರು ಶ್ರೀ ಲಕ್ಷ್ಮೀ ತಿಮ್ಮಪ್ಪಸ್ವಾಮಿ ಟ್ರೇಡಿಂಗ್ ಗುರುಮಿಠಕಲ್ ತಾಲ್ಲೂಕು, ಜಿ: ಯಾದಗಿರಿ 2. ವಾಹನ ಮಾಲೀಕ | 2 | ಸದರಿ ಪ್ರಕರಣವು ವಿಚಾರಣೆ ಹಂತದಲ್ಲಿರುತ್ತದೆ. |

| ಕ್ರ.ಸಂ. | ಪ್ರಕರಣ. ಸಂ | ಜಿಲ್ಲೆಯ ಹೆಸರು | ಮಾಹೆ | ದಸ್ತಗಿರಿಕೊಳ್ಳಲಾದ ವಸ್ತುವಿನ ವಿವರ (ಕ್ವಿಂ. ಗಳಲ್ಲಿ) | | | | ಕೈಗೊಳ್ಳಲಾದ ಕ್ರಮ | ಎಫ್‌ಐಆರ್ ಸಂಖ್ಯೆ ಮತ್ತು ದಿನಾಂಕ | ವ್ಯಕ್ತಿಯ ಹೆಸರು ವಿಳಾಸ | ಬಂಧಿಸಿದವರ ಸಂಖ್ಯೆ | ಪ್ರಕರಣವು ಪ್ರಸ್ತುತ ಯಾವ ಹಂತದಲ್ಲಿದೆ, ವಿವರ ನೀಡುವುದು. |
|---|---|---|---|---|---|---|---|---|---|---|---|---|
| | | | | ಅಕ್ಕಿ | ಗೋಧಿ | ಸಕ್ಕರೆ | ವಾಹನ ಸಂಖ್ಯೆ ಇತ್ಯಾದಿ | | | | | |
| 115 | ಇಸಿಕಾಯ್ದೆ/08/2020-21 | ಕಲಬುರಗಿ | ಜೂನ್-2020 | 81.00 | 0.00 | 0.00 | KA-32 D-3171 | ಪ್ರಕರಣದಲ್ಲಿ ಜಪ್ತಿ ಮಾಡಿದ ಅಕ್ಕಿಯನ್ನು ಜೇವರ್ಗಿ ಸಗಟು ಗೋದಾಮಿನಲ್ಲಿ ಮುಂದಿನ ಆದೇಶದವರೆಗೆ ಜಮಾ ಇಡಲಾಗಿರುತ್ತದೆ. ಹಾಗೂ ಪ್ರಕರಣದಲ್ಲಿ ಜಪ್ತಿ ಮಾಡಿದ | ಗುನ್ನೆ ಸಂಖ್ಯೆ: 109/2020 ದಿನಾಂಕ: 15.06.2020 | 1. ವಿರೇಶ ತಂದೆ ದೇವಿಂದ್ರಪ್ಪ ಸುಬೇದಾರ್ (ವಾಹನ ಚಾಲಕ). ಬುಟ್ನಾಳ ರೋಡ್ ಜೇವರ್ಗಿ, ತಾ॥ ಜೇವರ್ಗಿ ಜಿ॥ ಕಲಬುರಗಿ | 3 | ಸದರಿ ಪ್ರಕರಣವು ವಿಚಾರಣೆ ಹಂತದಲ್ಲಿರುತ್ತದೆ. |
| 116 | ಇಸಿಕಾಯ್ದೆ/09/2020-21 | ಕಲಬುರಗಿ | ಜೂನ್-2020 | 281.65 | 0.00 | 0.00 | GJ-03 BV-2251 | ಪ್ರಕರಣದಲ್ಲಿ ಜಪ್ತಿ ಮಾಡಿದ ಅಕ್ಕಿಯನ್ನು ಆಳಂದ ಸಗಟು ಗೋದಾಮಿನಲ್ಲಿ ಮುಂದಿನ ಆದೇಶದವರೆಗೆ ಜಮಾ ಇಡಲಾಗಿರುತ್ತದೆ. ಹಾಗೂ ಪ್ರಕರಣದಲ್ಲಿ ಜಪ್ತಿ ಮಾಡಿದ ವಾಹನವನ್ನು ಪೊಲೀಸ್ ಠಾಣೆಯಲ್ಲಿ ಮುಂದಿನ ಆದೇಶದ | ಗುನ್ನೆ ಸಂಖ್ಯೆ: 104/2020 ದಿನಾಂಕ: 21.06.2020 | 1. ಶ್ರೀ ಹಾಜಿ ಬಾಯಿ ತಂದೆ ಅಲ್ಲಾರಕ್ ಬಾಯಿ (ಚಾಲಕ) ಸಾ॥ ಬಜೀಡಾ ತಾ॥ ಧಡುಖಾ ಜಿಲ್ಲಾ॥ ಗುಜರಾತ 2. ಇತರರು (ಆರಕ್ಷಕ ಉಪ-ನಿರೀಕ್ಷಕರು. ಆಳಂದ ಪೊಲೀಸ್ ಠಾಣೆ | 2 | ಸದರಿ ಪ್ರಕರಣವು ವಿಚಾರಣೆ ಹಂತದಲ್ಲಿರುತ್ತದೆ. |
| 117 | ಇಸಿಕಾಯ್ದೆ/11/2020-21 | ಕಲಬುರಗಿ | ಜುಲೈ-2020 | 300.00 | 0.00 | 0.00 | KA-32 D-1835 | ಪ್ರಕರಣದಲ್ಲಿ ಜಪ್ತಿ ಮಾಡಿದ ಅಕ್ಕಿಯನ್ನು ಕಲಬುರಗಿ(ಪ) ಸಗಟು ಗೋದಾಮಿನಲ್ಲಿ ಮುಂದಿನ ಆದೇಶದವರೆಗೆ ಜಮಾ ಇಡಲಾಗಿರುತ್ತದೆ. ಹಾಗೂ ಪ್ರಕರಣದಲ್ಲಿ ಜಪ್ತಿ ಮಾಡಿದ | ಗುನ್ನೆ ಸಂಖ್ಯೆ: 91/2020 ದಿನಾಂಕ: 21.07.2020 | 1. ಮಹಾಕ ತಂದೆ ಇಸಾಕ್ ಜವಳ (ವಾಹನ ಸಂಖ್ಯೆ: KA-32 D-1835 ರ ಮಾಲೀಕ) ಸಾ॥ಆಳಂದ ಕಲಬುರಗಿ. 2. ಅಕಾರ (ವಾಹನ | 3 | ಸದರಿ ಪ್ರಕರಣವು ವಿಚಾರಣೆ ಹಂತದಲ್ಲಿರುತ್ತದೆ. |
| 118 | ಇಸಿಕಾಯ್ದೆ/12/2020-21 | ಕಲಬುರಗಿ | ಜುಲೈ-2020 | 26.00 | 0.00 | 0.00 | KA-32 B-2650 | ಪ್ರಕರಣದಲ್ಲಿ ಜಪ್ತಿ ಮಾಡಿದ ಅಕ್ಕಿಯನ್ನು ಚಿತ್ತಾಪೂರ ಸಗಟು ಗೋದಾಮಿನಲ್ಲಿ ಮುಂದಿನ ಆದೇಶದವರೆಗೆ ಜಮಾ ಇಡಲಾಗಿರುತ್ತದೆ. ಹಾಗೂ ಪ್ರಕರಣದಲ್ಲಿ ಜಪ್ತಿ ಮಾಡಿದ | ಗುನ್ನೆ ಸಂಖ್ಯೆ: 75/2020 ದಿನಾಂಕ: 22.07.2020 | 1. ಮಹಿಬೂಬ್ ತಂದೆ ಮಾಸುಮ (ವಾಹನ ಚಾಲಕ). ಸಾ॥ ಆಸರ ಮಹೊಲ್ಲಾ. ಚಿತ್ತಾಪೂರ 2. ಖಸ್ರಿರ್ ಸೇಠ್ ಅಡಕಿ (ದಾಸ್ತಾನು ಮಾಲೀಕ). | 2 | ಸದರಿ ಪ್ರಕರಣವು ವಿಚಾರಣೆ ಹಂತದಲ್ಲಿರುತ್ತದೆ. |
| 119 | ಇಸಿಕಾಯ್ದೆ/14/2020-21 | ಕಲಬುರಗಿ | ಆಗಸ್ಟ್-2020 | 312.25 | 11.12 | 0.00 | 0 | ಪ್ರಕರಣದಲ್ಲಿ ಜಪ್ತಿ ಮಾಡಿದ ಅಕ್ಕಿ & ಗೋಧಿಯನ್ನು ಕಲಬುರಗಿ(ಪ) ಸಗಟು ಗೋದಾಮಿನಲ್ಲಿ ಮುಂದಿನ ಆದೇಶದವರೆಗೆ ಜಮಾ ಇಡಲಾಗಿರುತ್ತದೆ. ಹಾಗೂ ಪ್ರಕರಣದಲ್ಲಿ ಸಂಬಂಧಪಟ್ಟವರಿಗೆ | ಗುನ್ನೆ ಸಂಖ್ಯೆ: 111/2020 ದಿನಾಂಕ: 25.08.2020 | ವಿಶ್ವನಾಥ ಜಿ ಪಾಟೀಲ್, ಮಾಲೀಕರು ಶಿವಶಕ್ತಿ ದಾಲ್ ಇಂಡಸ್ಟ್ರೀಜ್ ಸಂ॥86 ನಂದೂರ, ಕೆಸರಟಗಿ ಕೈಗಾರಿಕಾ ವಸಹಾತು, ಶಹಾಬಾದ್ | 1 | ಸದರಿ ಪ್ರಕರಣವು ವಿಚಾರಣೆ ಹಂತದಲ್ಲಿರುತ್ತದೆ. |
| 120 | ಇಸಿಕಾಯ್ದೆ/15/2020-21 | ಕಲಬುರಗಿ | ಆಗಸ್ಟ್-2020 | 25.00 | 0.00 | 0.00 | KA-20 B-2593 | ಪ್ರಕರಣದಲ್ಲಿ ಜಪ್ತಿ ಮಾಡಿದ ಅಕ್ಕಿಯನ್ನು ಕಲಬುರಗಿ(ಪ) ಸಗಟು ಗೋದಾಮಿನಲ್ಲಿ ಮುಂದಿನ ಆದೇಶದವರೆಗೆ ಜಮಾ ಇಡಲಾಗಿರುತ್ತದೆ. ಹಾಗೂ ಪ್ರಕರಣದಲ್ಲಿ ಜಪ್ತಿ ಮಾಡಿದ | ಗುನ್ನೆ ಸಂಖ್ಯೆ: 142/2020 ದಿನಾಂಕ: 17.08.2020 | 1. ಮೊಹಮ್ಮದ್ ಇಬ್ರಾಹಿಂ ತಂದೆ ಅಬ್ದುಲ್ ಅಜೀಜ ಗದ್ವಾಲ್ ಸಾ॥ ಮುಸ್ಲಿಮ್ ಚೌಕ್. ಚಿತ್ತಾಪೂರ ತಾ॥ಚಿತ್ತಾಪೂರ (ವಾಹನ ಸಂಖ್ಯೆ: ಏಂ-20 | 2 | ಸದರಿ ಪ್ರಕರಣವು ವಿಚಾರಣೆ ಹಂತದಲ್ಲಿರುತ್ತದೆ. |
| 121 | ಇಸಿಕಾಯ್ದೆ/16/2020-21 | ಕಲಬುರಗಿ | ಆಗಸ್ಟ್-2020 | 12.32 | 0.35 | 0.00 | 0 | ಪ್ರಕರಣದಲ್ಲಿ ಜಪ್ತಿ ಮಾಡಿದ ಅಕ್ಕಿ & ಗೋಧಿಯನ್ನು ಕಲಬುರಗಿ(ಪ) ಸಗಟು ಗೋದಾಮಿನಲ್ಲಿ ಮುಂದಿನ ಆದೇಶದವರೆಗೆ ಜಮಾ ಇಡಲಾಗಿರುತ್ತದೆ. ಹಾಗೂ ಪ್ರಕರಣದಲ್ಲಿ ಸಂಬಂಧಪಟ್ಟವರಿಗೆ | ಗುನ್ನೆ ಸಂಖ್ಯೆ: 58/2020 ದಿನಾಂಕ: 23.08.2020 | 1. ಉದಯಕುಮಾರ ತಂದೆ ದೇವೆಂದ್ರಪ್ಪ ಜಮಾದಾರ. ಬಂಬು ಬಜಾರ. ಕಲಬುರಗಿ 2. ಮಲ್ಲಿಕಾರ್ಜುನ ಕುಡಿ (ಅಂಗಡಿ ಮಾಲೀಕ). ಫರತಾಬಾದ್, ಕಲಬುರಗಿ | 2 | ಸದರಿ ಪ್ರಕರಣವು ವಿಚಾರಣೆ ಹಂತದಲ್ಲಿರುತ್ತದೆ. |
| 122 | ಇಸಿಕಾಯ್ದೆ/17/2020-21 | ಕಲಬುರಗಿ | ಆಗಸ್ಟ್-2020 | 20.00 | 0.00 | 0.00 | KA-32 A-4290 | ಪ್ರಕರಣದಲ್ಲಿ ಜಪ್ತಿ ಮಾಡಿದ ಅಕ್ಕಿಯನ್ನು ಜೇವರ್ಗಿ ಸಗಟು ಗೋದಾಮಿನಲ್ಲಿ ಮುಂದಿನ ಆದೇಶದವರೆಗೆ ಜಮಾ ಇಡಲಾಗಿರುತ್ತದೆ. ಹಾಗೂ ಪ್ರಕರಣದಲ್ಲಿ ಜಪ್ತಿ ಮಾಡಿದ ವಾಹನವನ್ನು ಪೋಲಿಸ ಠಾಣೆಯಲ್ಲಿ ಮುಂದಿನ ಆದೇಶದ ವರೆಗೆ | ಗುನ್ನೆ ಸಂಖ್ಯೆ: 100/2020 ದಿನಾಂಕ: 28.07.2020 | ಮಹಮ್ಮದ್ ಆಸಿಫ್ ಅಲಿ. ವಾಹನ ಸಂಖ್ಯೆ :KA-32 A-4290 ರ ಮಾಲೀಕ (ಆನ್‌ಲೈನ್ ಆಪ್ ಮೂಲಕ ಪಡೆದ ಮಾಹಿತಿಯಂತೆ) | 1 | ಸದರಿ ಪ್ರಕರಣವು ವಿಚಾರಣೆ ಹಂತದಲ್ಲಿರುತ್ತದೆ. |

| ಕ್ರ.ಸಂ. | | ಪ್ರಕರಣ. ಸಂ | ಜಿಲ್ಲೆಯ ಹೆಸರು | ಮಾಹೆ | ದಸ್ತಗಿರಿ ಮಾಡಲಾದ ವಸ್ತುವಿನ ವಿವರ (ಕ್ವಿಂ. ಗಳಲ್ಲಿ) | | | | ಕೈಗೊಳ್ಳಲಾದ ಕ್ರಮ | ಎಫ್‌ಐಆರ್ ಸಂಖ್ಯೆ ಮತ್ತು ದಿನಾಂಕ | ವ್ಯಕ್ತಿಯ ಹೆಸರು ವಿಳಾಸ | ಬಂಧಿತರ ಸಂಖ್ಯೆ | ಪ್ರಕರಣವು ಪ್ರಸ್ತುತ ಯಾವ ಹಂತದಲ್ಲಿದೆ, ವಿವರ ನೀಡುವುದು. |
|---|---|---|---|---|---|---|---|---|---|---|---|---|---|
| | | | | | ಅಕ್ಕಿ | ಗೋಧಿ | ಸಕ್ಕರೆ | ವಾಹನ ಸಂಖ್ಯೆ ಇತ್ಯಾದಿ | | | | | |
| | 123 | ಇಸಿಕಾಯ್ದೆ/18/2020-21 | ಕಲಬುರಗಿ | ಆಗಸ್ಟ್-2020 | 7.65 | 0.00 | 0.00 | KA-12 7356 | ಪ್ರಕರಣದಲ್ಲಿ ಜಪ್ತಿ ಮಾಡಿದ ಅಕ್ಕಿಯನ್ನು ಆಳಂದ ಸಗಟು ಗೋದಾಮಿನಲ್ಲಿ ಮುಂದಿನ ಆದೇಶದವರೆಗೆ ಜಮಾ ಇಡಲಾಗಿರುತ್ತದೆ. ಹಾಗೂ ಪ್ರಕರಣದಲ್ಲಿ ಜಪ್ತಿ ಮಾಡಿದ ವಾಹನವನ್ನು ಪೊಲೀಸ ಠಾಣೆಯಲ್ಲಿ ಮುಂದಿನ ಆದೇಶದ ವರೆಗೆ | ಗುನ್ನೆ ಸಂಖ್ಯೆ: 152/2020 ದಿನಾಂಕ: 29.08.2020 | 1. ಇಮಾಮ ಅಲಿ ಇಸ್ಮಾಯಿಲಸಾಬ ಸಿದ್ದಿಕ್ಕಿ, ಸಾ॥ ಆಳಂದ ತಾ॥ ಆಳಂದ 2. KA-12 7356 ರ ಚಾಲಕ | 2 | ಸದರಿ ಪ್ರಕರಣವು ವಿಚಾರಣೆ ಹಂತದಲ್ಲಿರುತ್ತದೆ. |
| 12 | 124 | ಎಫ್.ಎಸ್.ಡಿ. ಇಸಿಎ/ಸಿಆರ್ 03-2019/20 | ಸೆಪ್ಟೆಂಬರ್ 2019 | ತುಮಕೂರು ತಾಲ್ಲೂಕು ಕೋರ ಹೋಬಳಿ ಗೇರಹಳ್ಳಿ ಗ್ರಾಮದಲ್ಲಿ ಯಾವುದೇ ಪರವಾನಿಗೆ ಇಲ್ಲದ ಗೋದಾಮಿನಲ್ಲಿ ಅಕ್ರಮವಾಗಿ ಇಡಲಾಗಿದ್ದ ಮತ್ತು ವಶಪಡಿಸಿಕೊಂಡಿರುವ | | - | - | ವಶಪಡಿಸಿಕೊಂಡ ಅಕ್ಕಿಯನ್ನು ಎ.ಪಿ.ಎಲ್ ದರದಲ್ಲಿ ಮಾರಾಟ ಮಾಡಿ ಸರ್ಕಾರದ ಲೆಕ್ಕಶೀರ್ಷಿಕೆಗೆ ರೂ6,19,627/- ಗಳನ್ನು ಜಮೆ ಮಾಡಲಾಗಿರುತ್ತದೆ. | 0114/2019 ದಿ: 16.09.2019 | ಶ್ರೀ ನಾಗರಾಜು, ಚಿಕ್ಕಗಂಡಗಲ್, ತುಮಕೂರು ತಾಲ್ಲೂಕು, ಶ್ರೀನಿವಾಸ ಬೆಂಗಳೂರು, ಮೂರ್ತಿ ಯಲ್ಲಾಪುರ, ತುಮಕೂರು ತಾಲ್ಲೂಕು. | 3 | ಜೆ.ಎಂ.ಎಫ್.ಸಿ ನ್ಯಾಯಾಲಯದಲ್ಲಿ ಪ್ರಕರಣವು ವಿಚಾರಣೆಯ ಅಂತದಲ್ಲಿ ಇದ್ದು ನ್ಯಾಯಾಲಯದ ಅಂತಿಮ ತೀರ್ಪಿಗೆ ಒಳಪಟ್ಟು ಪ್ರಕರಣವನ್ನು ಮುಕ್ತಾಯಗೊಳಿಸಿದೆ. |
| | 125 | ಎಫ್.ಎಸ್.ಡಿ/ಇಸಿಎ/ಸಿಆರ್-01/2020-21 | ಮೇ-20 | ತಿಪಟೂರು | | - | ಕೆ.ಎ.44 9164 | ವಶಪಡಿಸಿಕೊಂಡ ಅಕ್ಕಿಯನ್ನು ಎ.ಪಿ.ಎಲ್ ದರದಲ್ಲಿ ಮಾರಾಟ ಮಾಡಿ ಸರ್ಕಾರದ ಲೆಕ್ಕಶೀರ್ಷಿಕೆಗೆ ರೂ 44,085/- ಗಳನ್ನು ಜಮೆ ಮಾಡಲಾಗಿರುತ್ತದೆ. | 0065/2020 ದಿ: 05.05.2020. | ಶ್ರೀ ಮುನ್ನ ಬಿನ್ ಮುನಾಫ್ ಸಾಬ್, ತಿಪಟೂರು ಟೌನ್, ಸೈಯದ್ ಗೌಸ್ ಬಿನ್ ಸೈಯದ್ ಪೀರ್ ಗಾಂಧಿನಗರ ತಿಪಟೂರು ಟೌನ್. | 2 | ಪ್ರಕರಣವು ವಿಚಾರಣೆ ಹಂತದಲ್ಲಿ ಇರುತ್ತದೆ. |
| | 126 | 134/2019 | | ಸೆಪ್ಟೆಂಬರ್ 2019 | 14 | - | - | - | - | 134/2019 & 23.09.2019 | ಶಂಶುದ್ದೀನ್, ದೇವದುರ್ಗ | | ಪೊಲೀಸ್ ವಿಚಾರಣಾ ಹಂತದಲ್ಲಿರುವುದು |
| | 127 | 6/2020 | | ಜನವರಿ 2020 | | - | - | - | - | 6/2020 & 17.01.2020 | ಗುರುರಾಜ್, ರಾಯಚೂರು | | ಪೊಲೀಸ್ ವಿಚಾರಣಾ ಹಂತದಲ್ಲಿರುವುದು |
| | 128 | 8/2020 | | ಜನವರಿ 2020 | 3 | - | - | - | - | 8/2020 & 21.01.2020 | 1.ಚಿಟ್ಟೆಪ್ಪ, ಕೊಸಗಿ 2.ವರದರಾಜು, ಕೊಸಗಿ 3. ಮಧು ಕೊಸಗಿ | | ಪೊಲೀಸ್ ವಿಚಾರಣಾ ಹಂತದಲ್ಲಿರುವುದು |
| | 129 | 10/2020 | | ಫೆಬ್ರವರಿ 2020 | 15.2 | - | - | KA-36 B 1400 | - | 10/2020 & 18.02.2020 | 1.ಮಹೇಶ, ರಾಯಚೂರು 2. ಈರೇಶ, ಗಿಲ್ಲೇಸುಗೂರು ಕ್ಯಾಂಪ್ | | ಪೊಲೀಸ್ ವಿಚಾರಣಾ ಹಂತದಲ್ಲಿರುವುದು |

| ಕ್ರ.ಸಂ. | | ಪ್ರಕರಣ. ಸಂ | ಜಿಲ್ಲೆಯ ಹೆಸರು | ಮಾಹೆ | ವಶಪಡಿಸಿಕೊಳ್ಳಲಾದ ವಸ್ತುವಿನ ವಿವರ (ಕ್ವಿಂ. ಗಳಲ್ಲಿ) | | | | ಕೈಗೊಳ್ಳಲಾದ ಕ್ರಮ | ಎಫ್‌ಐಆರ್ ಸಂಖ್ಯೆ ಮತ್ತು ದಿನಾಂಕ | ವ್ಯಕ್ತಿಯ ಹೆಸರು ವಿಳಾಸ | ಬಂಧಿಸಿದವರ ಸಂಖ್ಯೆ | ಪ್ರಕರಣವು ಪ್ರಸ್ತುತ ಯಾವ ಹಂತದಲ್ಲಿದೆ, ವಿವರ ನೀಡುವುದು. |
|---|---|---|---|---|---|---|---|---|---|---|---|---|---|
| | | | | | ಅಕ್ಕಿ | ಗೋಧಿ | ಸಕ್ಕರೆ | ವಾಹನ ಸಂಖ್ಯೆ ಇತ್ಯಾದಿ | | | | | |
| 13 | 130 | 54/2020 | ರಾಯಚೂರು | ಏಪ್ರಿಲ್ 2020 | 39.6 | - | - | - | - | 54/2020 & 06.04.2020 | 1.ಶ್ರೀಕಾಂತ, ದೇವದುರ್ಗ<br>2.ಬಸವರಾಜು.ದೇವದುರ್ಗ<br>3.ರಂಗರೆಡ್ಡಿ, ರಾಯಚೂರು | | ಪೊಲೀಸ್ ವಿಚಾರಣಾ ಹಂತದಲ್ಲಿರುವುದು |
| | 131 | 74/2020 | | ಮೇ 2020 | 130 | - | - | KA-56/3140 | - | 74/2020 & 20.05.2020 | - | | ಪೊಲೀಸ್ ವಿಚಾರಣಾ ಹಂತದಲ್ಲಿರುವುದು |

| ಕ್ರ.ಸಂ. | | ಪ್ರಕರಣ. ಸಂ | ಜಿಲ್ಲೆಯ ಹೆಸರು | ಮಾಹೆ | ವಶಪಡಿಸಿಕೊಳ್ಳಲಾದ ವಸ್ತುವಿನ ವಿವರ (ಕ್ವಿಂ. ಗಳಲ್ಲಿ) | | | | ಕೈಗೊಳ್ಳಲಾದ ಕ್ರಮ | ಎಫ್.ಐ.ಆರ್ ಸಂಖ್ಯೆ ಮತ್ತು ದಿನಾಂಕ | ವ್ಯಕ್ತಿಯ ಹೆಸರು ವಿಳಾಸ | ಬಂಧಿತರ ಸಂಖ್ಯೆ | ಪ್ರಕರಣವು ಪ್ರಸ್ತುತ ಯಾವ ಹಂತದಲ್ಲಿದೆ, ವಿವರ ನೀಡುವುದು. |
|---|---|---|---|---|---|---|---|---|---|---|---|---|---|
| | | | | | ಅಕ್ಕಿ | ಗೋಧಿ | ಸಕ್ಕರೆ | ವಾಹನ ಸಂಖ್ಯೆ ಇತ್ಯಾದಿ | | | | | |
| | 132 | 87/2020 | | ಜೂನ್ 2020 | 24 | - | - | KA-33 A 9436 | - | 87/2020 & 19.06.2020 | 1.ಅಂಬರಯ್ಯಸ್ವಾಮಿ.ಕಕ್ಕೇರ 2.ಪ್ರಭಾಕರ.ಕಕ್ಕೇರ 3.ಮಲ್ಲಿಕಾರ್ಜುನ ಕಕ್ಕೇರ | | ಪೊಲೀಸ್ ವಿಚಾರಣಾ ಹಂತದಲ್ಲಿರುವುದು |
| | 133 | 79/2020 | | ಜುಲೈ 2020 | 15 | - | - | KA-36 B 7758 | - | 79/2020 & 30.07.2020 | [illegible] | | ಪೊಲೀಸ್ ವಿಚಾರಣಾ ಹಂತದಲ್ಲಿರುವುದು |
| | 134 | 56/2020 | | ಜುಲೈ 2020 | 20.25 | - | - | | - | 56/2020 & 18.07.2020 | 1.ಜಯರಾಮು.ರಾಯಚೂರು 2. ಗುಂಜಳ್ಳಿ ವೆಂಕಟರೆಡ್ಡಿ, ರಾಯಚೂರು | | ಪೊಲೀಸ್ ವಿಚಾರಣಾ ಹಂತದಲ್ಲಿರುವುದು |
| | 135 | 129/2020 | | ಸೆಪ್ಟೆಂಬರ್ 2020 | 49 | - | - | - | - | 129/2020 & 13.09.2020 | 1.ಅಮರೇಶ ಆಲಿಯಾಸ್ ಅಮರಯ್ಯ ಸ್ವಾಮಿ ಆಲಿಯಾಸ್ ಗುಂಡಯ್ಯ ಸ್ವಾಮಿ.ಮಟ್ಟಿ 2. ನರೇಂದ್ರಪ್ಪ ಗುರುಮಿಟಕಲ್ | | ಪೊಲೀಸ್ ವಿಚಾರಣಾ ಹಂತದಲ್ಲಿರುವುದು |

ಏಪ್ರಿಲ್ 2019 ರಿಂದ ಆಗಸ್ಟ್ 2020 ರವರೆಗೆ

| | |
|---|---|
| ಪ್ರಕರಣ ಸಂಖ್ಯೆ | 289 |
| ಎಫ್.ಐ.ಆರ್ ದಾಖಲಾಗಿರುವ ಪ್ರಕರಣಗಳು | 259 |
| ಬಂಧಿಸಿರುವವರ ಸಂಖ್ಯೆ | 253 |
| ಜಪ್ತಾದ ಅಕ್ಕಿ ದಾಸ್ತಾನು | 22914.42 qtl |



**ಕರ್ನಾಟಕ ಸರ್ಕಾರ**

ಸಂಖ್ಯೆ: ನಅಇ 171 ಯುಎಂಎಸ್ 2020

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸ ಸೌಧ,
ಬೆಂಗಳೂರು, ದಿನಾಂಕ:21-01-2021

**ಇವರಿಂದ,**

ಸರ್ಕಾರದ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ,
ವಿಕಾಸ ಸೌಧ,
ಬೆಂಗಳೂರು.

**ಇವರಿಗೆ,**

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ,
ಬೆಂಗಳೂರು.

ಮಾನ್ಯರೇ,

**ವಿಷಯ:** ವಿಧಾನ ಸಭೆಯ ಸದಸ್ಯರಾದ ಶ್ರೀ. ದೇವಾನಂದ್ ಪುಲಸಿಂಗ್ ಚವಾಣ್ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1011ಕ್ಕೆ ಉತ್ತರ ನೀಡುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ. ದೇವಾನಂದ್ ಪುಲಸಿಂಗ್ ಚವಾಣ್ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1011ಕ್ಕೆ ಸಂಬಂಧಿಸಿದ ಉತ್ತರದ **25** ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

(ಲತಾ. ಕೆ)
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.
(ಎಂ.ಎ-2 & ಮಂಡಳಿ)

25/1/21

# ಕರ್ನಾಟಕ ವಿಧಾನಸಭೆ

| | | |
|---|---|---|
| ಸದಸ್ಯರ ಹೆಸರು | : | ಶ್ರೀ ದೇವಾನಂದ್ ಫುಲಸಿಂಗ್ ಚವಾಣ್ (ನಾಗಠಾಣ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1011 |
| ಉತ್ತರಿಸಬೇಕಾದ ದಿನಾಂಕ | : | 11.12.2020 |
| ಉತ್ತರಿಸಬೇಕಾದವರು | : | ನಗರಾಭಿವೃದ್ಧಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ನೂತನ ತಾಲ್ಲೂಕಾಗಿ ರಚನೆಗೊಂಡಿರುವ ನಾಗಠಾಣ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯ ಚಡಚಣ ಪಂಚಾಯತಿಯಲ್ಲಿ ಬೇಸಿಗೆ ಸಮಯದಲ್ಲಿ ಕುಡಿಯುವ ನೀರಿನ ಅಭಾವವುಂಟಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ) | ಬಂದಿದ್ದಲ್ಲಿ, ಚಡಚಣ ಪಟ್ಟಣಕ್ಕೆ ಕುಡಿಯುವ ನೀರು ಒದಗಿಸಲು ಸರ್ಕಾರ ಕೈಗೊಂಡ ಕ್ರಮಗಳೇನು; | ಕರ್ನಾಟಕ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಗೆ ಇತ್ತೀಚಿಗೆ ಅನುಮೋದನೆ ನೀಡಿರುವ ಯೋಜನೆಗಳನ್ನು ಪೂರ್ಣಗೊಳಿಸಲು 3 ವರ್ಷಗಳು ಬೇಕಾಗಿರುವುದರಿಂದ, 3 ವರ್ಷದ ನಂತರ ಮಾತ್ರ ಹೊಸ ಯೋಜನೆಗಳನ್ನು ಯೋಜಿಸುವಂತೆ ಆರ್ಥಿಕ ಇಲಾಖೆಯು ನೀಡಿದ್ದ ಅಭಿಪ್ರಾಯದನ್ವಯ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ವತಿಯಿಂದ 2018ನೇ ಸಾಲಿನಲ್ಲಿ ಟೌಕಳಿ-ಧೂಳಖೇಡ ಬ್ಯಾರೇಜ್ ನಿಂದ ಚಡಚಣ ಪಟ್ಟಣಕ್ಕೆ ನಿರಂತರ ಒತ್ತಡಯುಕ್ತ ನೀರು ಸರಬರಾಜು ಮಾಡಲು ಆಡಳಿತ ಅನುಮೋದನೆಗಾಗಿ ಸ್ವೀಕೃತವಾಗಿದ್ದ ರೂ.6030.00 ಲಕ್ಷಗಳ ಅಂದಾಜು ಪಟ್ಟಿಯನ್ನು ತಿರಸ್ಕರಿಸಲಾಗಿತ್ತು.<br><br>ನಂತರ, ಟೌಕಳಿ-ಧೂಳಖೇಡ ಬ್ಯಾರೇಜಜ್ ನಿಂದ ಚಡಚಣ ಪಟ್ಟಣಕ್ಕೆ ಸಂಯುಕ್ತ ನೀರು ಸರಬರಾಜು ವ್ಯವಸ್ಥೆ ಕಲ್ಪಿಸಲು ಮಂಡಳಿಯ ವತಿಯಿಂದ ರೂ.7342.00 ಲಕ್ಷಗಳ ಅಂದಾಜು ಪಟ್ಟಿಯನ್ನು ಆಡಳಿತಾತ್ಮಕ ಅನುಮೋದನೆಗಾಗಿ ದಿನಾಂಕ:22-09-2020 ರಂದು ಸರ್ಕಾರಕ್ಕೆ ಸಲ್ಲಿಸಿದ್ದು, ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿರುತ್ತದೆ. |
| ಇ) | ಚಡಚಣ ಪಟ್ಟಣಕ್ಕೆ ಭೀಮಾ ನದಿಯ ಧೂಳಖೇಡ-ಟಾಕಳಿ ಬ್ಯಾರೇಜ್ ನಿಂದ ಕುಡಿಯುವ ನೀರು ಪೂರೈಸುವ ಯೋಜನೆಯ ಅನುದಾನಕ್ಕಾಗಿ ಹಣಕಾಸು ಇಲಾಖೆಗೆ ಹಲವಾರು ಬಾರಿ ಪ್ರಸ್ತಾವನೆ ಸಲ್ಲಿಸಿದ್ದರೂ ಸಹ ಪ್ರಸ್ತಾವನೆ ತಿರಸ್ಕರಿಸಿರುವುದಕ್ಕೆ ಕಾರಣವೇನು; (ವಿವರವಾದ ಮಾಹಿತಿ ನೀಡುವುದು) | |
| ಈ) | ಸದರಿ ಪ್ರಸ್ತಾವನೆಗೆ ಅನುಮೋದನೆ ನೀಡಿ ಅನುದಾನ ಬಿಡುಗಡೆ ಮಾಡಲು ಸರ್ಕಾರ ಕ್ರಮ ಕೈಗೊಳ್ಳುವುದೇ? (ವಿವರವಾದ ಮಾಹಿತಿ ನೀಡುವುದು) | |

ಸಂಖ್ಯೆ: ನಅಇ 171 ಯುಎಂಎಸ್ 2020

(ಬಿ.ಎ.ಬಸವರಾಜ)
ನಗರಾಭಿವೃದ್ಧಿ ಸಚಿವರು



**ಕರ್ನಾಟಕ ಸರ್ಕಾರ**

ಸಂಖ್ಯೆ: ನಅಇ 186 ಯುಎಂಎಸ್ 2020

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸ ಸೌಧ,
ಬೆಂಗಳೂರು, ದಿನಾಂಕ:21-01-2021

**ಇವರಿಂದ,**

ಸರ್ಕಾರದ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ,
ವಿಕಾಸ ಸೌಧ,
ಬೆಂಗಳೂರು.

**ಇವರಿಗೆ,**

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ,
ಬೆಂಗಳೂರು.

ಮಾನ್ಯರೇ,

**ವಿಷಯ:** ವಿಧಾನ ಸಭೆಯ ಸದಸ್ಯರಾದ ಶ್ರೀ. ನಂಜೇಗೌಡ ಕೆ.ವೈ. ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1029ಕ್ಕೆ ಉತ್ತರ ನೀಡುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ. ನಂಜೇಗೌಡ ಕೆ.ವೈ. ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1029ಕ್ಕೆ ಸಂಬಂಧಿಸಿದ ಉತ್ತರದ **25** ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

**(ಲತಾ. ಕೆ)**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.
(ಎಂ.ಎ-2 & ಮಂಡಳಿ)

25/1/21

# ಕರ್ನಾಟಕ ವಿಧಾನಸಭೆ

| | | |
|---|---|---|
| ಸದಸ್ಯರ ಹೆಸರು | : | ಶ್ರೀ ನಂಜೇಗೌಡ ಕೆ.ವೈ (ಮಾಲೂರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1029 |
| ಉತ್ತರಿಸಬೇಕಾದ ದಿನಾಂಕ | : | 11.12.2020. |
| ಉತ್ತರಿಸಬೇಕಾದವರು | : | ನಗರಾಭಿವೃದ್ಧಿ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೋಲಾರ ಜಿಲ್ಲೆ, ಮಾಲೂರು ಪುರಸಭೆ ವ್ಯಾಪ್ತಿಯಲ್ಲಿ ಕೆ.ಯು.ಡಬ್ಲ್ಯೂ.ಎಸ್ ಅಂಡ್ ಡಿ.ಬಿ ಇಲಾಖೆಯಿಂದ ಒಟ್ಟು ಎಷ್ಟು ಕಿ.ಮೀ ಗಳಷ್ಟು ಒಳಚರಂಡಿ ಕಾಮಗಾರಿಗಳನ್ನು ನಿರ್ವಹಿಸಲಾಗಿದೆ; (ವಿವರ ಒದಗಿಸುವುದು) | ಮಾಲೂರು ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಕಲ್ಪಿಸಲು ರೂ.2250.00 ಲಕ್ಷಗಳ ಅಂದಾಜು ಪಟ್ಟಿಗೆ ದಿನಾಂಕ: 28-02-2009 ರಂದು ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಿದ್ದು, ರೂ. 2454.00 ಲಕ್ಷಗಳ ಪರಿಷ್ಕೃತ ಅಂದಾಜು ಪಟ್ಟಿಗೆ ದಿನಾಂಕ 09-11-2017 ರಂದು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.<br><br>ಮಾಲೂರು ಪುರಸಭೆ ವ್ಯಾಪ್ತಿಯಲ್ಲಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ವತಿಯಿಂದ ಒಟ್ಟು 83.05 ಕಿ.ಮೀ ಒಳಚರಂಡಿ ಕೊಳವೆ ಮಾರ್ಗ ಅಳವಡಿಸಲಾಗಿದೆ.<br><br>**ಆಂತರಿಕ ಕೊಳವೆ ಮಾರ್ಗ:**<br>150 ಮಿ.ಮೀ : 74.58 ಕಿ.ಮೀ<br>200 ಮಿ.ಮೀ : 4.04 ಕಿ.ಮೀ<br>250 ಮಿ.ಮೀ : 1.30 ಕಿ.ಮೀ<br><br>**ಆರ್.ಸಿ.ಸಿ ಮುಖ್ಯ ಕೊಳವೆ ಮಾರ್ಗ:**<br>300 ಮಿ.ಮೀ : 1.78 ಕಿ.ಮೀ<br>450 ಮಿ.ಮೀ : 1.35 ಕಿ.ಮೀ<br>**ಒಟ್ಟು: 83.05 ಕಿ.ಮೀ**<br><br>ಸದರಿ ಕೊಳವೆ ಮಾರ್ಗದ ಕಾಮಗಾರಿಯನ್ನು ಆಗಸ್ಟ-2012 ರಲ್ಲಿ ಪೂರ್ಣಗೊಳಿಸಲಾಗಿದೆ. |
| ಆ) | ಸದರಿ ಕಾಮಗಾರಿಯ ಗುಣಮಟ್ಟವನ್ನು ಸರ್ಕಾರ ಖಚಿತಪಡಿಸಿಕೊಂಡಿದೆಯೇ; (ವಿವರ ಒದಗಿಸುವುದು) | ಮಂಡಳಿಯ ಇಂಜಿನಿಯರುಗಳನ್ನೊಳಗೊಂಡಂತೆ ಮಂಡಳಿಯ ನೊಂದಾಯಿತ 3ನೇ ತಪಾಸಣೆ ಸಂಸ್ಥೆಯಾದ (3rd party agency) ಮೆ\|\| ಐ.ಆರ್.ಎಸ್, ಇನ್ಸ್‌ಪೆಕ್ಷನ್ಸ್ ಸರ್ವೀಸ್ಸ್ ಇವರ ಮುಖಾಂತರ ತಪಾಸಣೆ ನಡೆಸಿ, ಕಾಮಗಾರಿಯ ಗುಣಮಟ್ಟವನ್ನು ಖಾತ್ರಿಪಡಿಸಿಕೊಳ್ಳಲಾಗಿದೆ. |
| ಇ) | ಒಳಚರಂಡಿ ಕಾಮಗಾರಿಯ Hydralic Flow Test ನಡೆಸಿ ಯೋಜನೆಯನ್ನು ಸ್ಥಳೀಯ ಸಂಸ್ಥೆಗೆ ನಿರ್ವಹಣೆಗಾಗಿ ಹಸ್ತಾಂತರಿಸಲಾಗಿದೆಯೇ; (ವಿವರ ಒದಗಿಸುವುದು) | ➢ ಸದರಿ ಒಳಚರಂಡಿ ಕೊಳವೆ ಮಾರ್ಗದ ಫ್ಲೋಟೆಸ್ಟ್ (Hydralic Flow Test) ಅನ್ನು 3ನೇ ತಪಾಸಣೆ ಏಜನ್ಸಿ ಮೆ\|\| Enzen Water Solutions Pvt., Ltd, Bengaluru ಇವರ ಮೇಲುಸ್ತುವಾರಿಯಲ್ಲಿ ಮತ್ತು ಸ್ಥಳೀಯ ಸಂಸ್ಥೆ ಹಾಗೂ ಸಾರ್ವಜನಿಕರ ಸಮಕ್ಷಮದಲ್ಲಿ ಫ್ಲೋಟೆಸ್ಟ್ ಮಾಡಲಾಗಿದೆ.<br>➢ ಸದರಿ ಯೋಜನೆಯ ಆಂತರಿಕ ಕೊಳವೆ ಮಾರ್ಗದ ಕಾಮಗಾರಿಗಳನ್ನು ಆಗಸ್ಟ 2012ರಲ್ಲಿ ಪೂರ್ಣಗೊಳಿಸಿ, ಸ್ಥಳೀಯ ಸಂಸ್ಥೆಗೆ ಹಸ್ತಾಂತರಿಸಲಾಗಿದೆ.<br>➢ ಈ ಯೋಜನೆಯಡಿ 4.00 ಎಂ.ಎಲ್.ಡಿ ಸಾಮರ್ಥ್ಯದ ಎಸ್.ಬಿ.ಆರ್ ತಂತ್ರಜ್ಞಾನದ ಮಲೀನದ ನೀರು ಶುದ್ದೀಕರಣ ಘಟಕ ಹಾಗೂ ಇತರೆ ಪೂರಕ ಕಾಮಗಾರಿಗಳನ್ನು ಸೆಪ್ಟೆಂಬರ್ 2016ರಲ್ಲಿ ಪೂರ್ಣಗೊಳಿಸಿದ್ದು, ಪ್ರಸ್ತುತ ಮಂಡಳಿಯ ನಿರ್ವಹಣೆಯಲ್ಲಿದೆ. |

| | | |
|---|---|---|
| ಈ) | ಯೋಜನೆ ಹಸ್ತಾಂತರ ಆಗದೇ ಇದ್ದಲ್ಲಿ, ಕಾರಣಗಳೇನು? (ವಿವರ ಒದಗಿಸುವುದು) | ➢ ಒಳಚರಂಡಿ ಯೋಜನೆಯ ಆಂತರಿಕ ಕೊಳವೆ ಮಾರ್ಗದ ಕಾಮಗಾರಿಗಳನ್ನು ಆಗಸ್ಟ್ 2012 ರಲ್ಲಿ ಪೂರ್ಣಗೊಳಿಸಿ, ಸ್ಥಳೀಯ ಸಂಸ್ಥೆಗೆ ಹಸ್ತಾಂತರಿಸಲಾಗಿದೆ.<br>➢ 4.00 ಎಂ.ಎಲ್.ಡಿ ಸಾಮರ್ಥ್ಯದ ಎಸ್.ಬಿ.ಆರ್ ತಂತ್ರಜ್ಞಾನದ ಮಲೀನ ನೀರು ಶುದ್ದೀಕರಣ ಘಟಕ ಹಾಗೂ ಇತರೆ ಪೂರಕ ಕಾಮಗಾರಿಗಳನ್ನು ಸೆಪ್ಟೆಂಬರ್ 2016 ರಲ್ಲಿ ಪೂರ್ಣಗೊಳಿಸಿ ಚಾಲನೆಗೊಳಿಸಲಾಗಿದೆ. ಆದರೆ, ವಿನ್ಯಾಸಗೊಳಿಸಿದ ಪ್ರಮಾಣದಲ್ಲಿ ಮಲೀನ ನೀರು ಶುದ್ದೀಕರಣ ಘಟಕಕ್ಕೆ ನೀರು ಬರದೇ ಇರುವುದರಿಂದ, ಈ ಘಟಕವನ್ನು ಪುರಸಭೆಗೆ ಹಸ್ತಾಂತರಿಸಿರುವುದಿಲ್ಲ.<br>➢ ಇದಲ್ಲದೆ, ಪುರಸಭೆ ವತಿಯಿಂದ ಪಟ್ಟಣದ ವಿವಿಧ ರಸ್ತೆಗಳಲ್ಲಿ ರಸ್ತೆ ಅಭಿವೃದ್ಧಿ ಪಡಿಸುವ ಸಂದಂರ್ಭದಲ್ಲಿ ಒಳಚರಂಡಿ ಕೊಳವೆ ಮಾರ್ಗ ಮತ್ತು ಆಳುಗುಂಡಿಗಳಿಗೆ ಧಕ್ಕೆಯಾಗಿದ್ದು, ಇದರಿಂದ ಮಲೀನ ನೀರು ಶುದ್ದೀಕರಣ ಘಟಕಕ್ಕೆ ಒಳಚರಂಡಿ ನೀರು ಬರದೇ ಇರುವುದು ಕಂಡುಬಂದಿರುತ್ತದೆ.<br>➢ ಪಟ್ಟಣದ ಬಹುತೇಕ ಆಂತರಿಕ ಕೊಳವೆ ಮಾರ್ಗಗಳನ್ನು ರಾಜ ಕಾಲುವೆಯ ಬದಿಯಲ್ಲಿ ಅಳವಡಿಸಿದ್ದು ಮುಖ್ಯ ಹೊರ ಹರಿವು ಕೊಳವೆ ಮಾರ್ಗಕ್ಕೆ ಸಂಪರ್ಕ ಕಲ್ಪಿಸಲಾಗಿತ್ತು. ಸಣ್ಣ ನೀರಾವರಿ ಇಲಾಖೆಯಿಂದ ರಾಜ ಕಾಲುವೆ ಅಭಿವೃದ್ಧಿ ಪಡಿಸುವ ಸಂದರ್ಭದಲ್ಲಿ ಮುಖ್ಯ ಹೊರ ಹರಿವು ಕೊಳವೆ ಮಾರ್ಗವನ್ನು ಹಾನಿ ಮಾಡಲಾಗಿದೆ. ಸದರಿ ವಿಷಯವನ್ನು ದಿನಾಂಕ 29-07-2017 ರಂದು ನಡೆದ ಪುರಸಭೆಯ ಸಭೆಯಲ್ಲಿ ಸದಸ್ಯರ ಗಮನಕ್ಕೆ ತರಲಾಗಿದೆ.<br>➢ ಈ ಕೊಳವೆ ಮಾರ್ಗಗಳನ್ನು ದುರಸ್ಥಿ ಪಡಿಸಲು ಮಂಡಳಿಯ ವತಿಯಿಂದ ರೂ.55 ಲಕ್ಷಗಳ ಅಂದಾಜು ಪಟ್ಟಿಯನ್ನು ತಯಾರಿಸಿ, ಸದರಿ ಅಂದಾಜು ಪಟ್ಟಿಗೆ ಮೇಲುರುಜುವಿನೊಂದಿಗೆ ಅಂದಾಜು ಪಟ್ಟಿಯ ಮೊತ್ತವನ್ನು ಮಂಡಳಿಗೆ ಠೇವಣೀಕರಿಸಲು ದಿನಾಂಕ 15-06-2018ರಂದು ಸ್ಥಳೀಯ ಸಂಸ್ಥೆಯನ್ನು ಕೋರಲಾಗಿತ್ತು. ಆದರೆ, ಸ್ಥಳೀಯ ಸಂಸ್ಥೆಯ ವತಿಯಿಂದಲೇ ಕೆಲವು ಸ್ಥಳಗಳಲ್ಲಿ ಒಳಚರಂಡಿ ಕೊಳವೆ ಮಾರ್ಗದ ದುರಸ್ಥಿ ಹಾಗೂ ನಿರ್ವಹಣೆಯನ್ನು ಕೈಗೊಳ್ಳಲಾಗುತ್ತಿದೆ.<br>➢ ಪುರಸಭೆ ವತಿಯಿಂದ ದುರಸ್ಥಿ ಕಾಮಗಾರಿಯ ಅಂದಾಜು ಮೊತ್ತವನ್ನು ಮಂಡಳಿಗೆ ಠೇವಣೀಕರಿಸಿದ ನಂತರ ಪೂರ್ಣ ಪ್ರಮಾಣದ ದುರಸ್ಥಿ ಕಾಮಗಾರಿಯನ್ನು ಕೈಗೊಂಡು, ಕಾಮಗಾರಿಯನ್ನು ಪೂರ್ಣಗೊಳಿಸಿ ಮಲೀನ ನೀರು ಶುದ್ದೀಕರಣ ಘಟಕವನ್ನು ಸ್ಥಳೀಯ ಸಂಸ್ಥೆಗೆ ಹಸ್ತಾಂತರಿಸಲು ಕ್ರಮಕೈಗೊಳ್ಳಲಾಗುವುದು. |

ನಅಇ 186 ಯುಎಂಎಸ್ 2020

(ಬಿ.ಎ.ಬಸವರಾಜ)
ನಗರಾಭಿವೃದ್ಧಿ ಸಚಿವರು



**ಕರ್ನಾಟಕ ಸರ್ಕಾರ**

ಸಂಖ್ಯೆ: ನಅಇ 182 ಯುಎಂಎಸ್ 2020

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸ ಸೌಧ,
ಬೆಂಗಳೂರು, ದಿನಾಂಕ:21-01-2021

**ಇವರಿಂದ,**

ಸರ್ಕಾರದ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ,
ವಿಕಾಸ ಸೌಧ,
ಬೆಂಗಳೂರು.

**ಇವರಿಗೆ,**

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ,
ಬೆಂಗಳೂರು.

ಮಾನ್ಯರೇ,

**ವಿಷಯ:** ವಿಧಾನ ಸಭೆಯ ಸದಸ್ಯರಾದ ಶ್ರೀ. ಶಿವಣ್ಣ ಬಿ. ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1081ಕ್ಕೆ ಉತ್ತರ ನೀಡುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ. ಶಿವಣ್ಣ ಬಿ. ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1081ಕ್ಕೆ ಸಂಬಂಧಿಸಿದ ಉತ್ತರದ **25** ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

(ಲತಾ. ಕೆ)
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.
(ಎಂ.ಎ-2 & ಮಂಡಳಿ)

25/1/21

## ಕರ್ನಾಟಕ ವಿಧಾನಸಭೆ

| | | |
|---|---|---|
| ಸದಸ್ಯರ ಹೆಸರು | : | ಶ್ರೀ ಶಿವಣ್ಣ ಬಿ (ಆನೇಕಲ್) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1081 |
| ಉತ್ತರಿಸಬೇಕಾದ ದಿನಾಂಕ | : | 11.12.2020 |
| ಉತ್ತರಿಸಬೇಕಾದವರು | : | ನಗರಾಭಿವೃದ್ಧಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಆನೇಕಲ್ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿರುವ ಎಷ್ಟು ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಒಳಚರಂಡಿ ನಿರ್ಮಿಸಲಾಗಿದೆ; (ಪೂರ್ಣ ಮಾಹಿತಿ ನೀಡುವುದು) | ಆನೇಕಲ್ ವಿಧಾನಸಭೆ ಕ್ಷೇತ್ರ ವ್ಯಾಪ್ತಿಯ ಒಟ್ಟು 5 ಸ್ಥಳೀಯ ಸಂಸ್ಥೆಗಳ ಪೈಕಿ ಆನೇಕಲ್ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆ ಕಲ್ಪಿಸಲಾಗಿದೆ. |
| ಆ) | ಈ ಕ್ಷೇತ್ರದ ವ್ಯಾಪ್ತಿಯ ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಸಮರ್ಪಕ ಒಳಚರಂಡಿ ನಿರ್ಮಾಣದ ಪ್ರಸ್ತಾವನೆ ಸರ್ಕಾರದ ಮುಂದೆ ಇದೆಯೇ; (ಪೂರ್ಣ ಮಾಹಿತಿ ನೀಡುವುದು) | **1. ಆನೇಕಲ್ ಪಟ್ಟಣ :** ಆನೇಕಲ್ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆ ಕಲ್ಪಿಸಲು ರೂ.3811.00 ಲಕ್ಷಗಳ ಅಂದಾಜು ಪಟ್ಟಿಗೆ ದಿನಾಂಕ:16.11.2011 ರಂದು ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ. ಸದರಿ ಯೋಜನೆಯನ್ನು ಪೂರ್ಣಗೊಳಿಸಿ ನವೆಂಬರ್ 2019ರಲ್ಲಿ ಚಾಲನೆಗೊಳಿಸಿ ದಿನಾಂಕ:08.05.2020 ರಂದು ಮುಂದಿನ ನಿರ್ವಹಣೆಗಾಗಿ ಆನೇಕಲ್ ಪುರಸಭೆಗೆ ಹಸ್ತಾಂತರಿಸಲಾಗಿದೆ.<br>ಆದಾಗ್ಯೂ, ಪಟ್ಟಣದಲ್ಲಿ ಬಿಟ್ಟು ಹೋಗಿರುವ ಹಾಗೂ ಹೊಸದಾಗಿ ಅಭಿವೃದ್ಧಿ ಹೊಂದಿದ ಬಡಾವಣೆಗಳಲ್ಲಿ ಒಳಚರಂಡಿ ವ್ಯವಸ್ಥೆ ಕಲ್ಪಿಸಲು ಅಗತ್ಯವಿರುವ ಆಂತರಿಕ ಕೊಳವೆ ಮಾರ್ಗ ಹಾಗೂ ಗೃಹ ಸಂಪರ್ಕಗಳನ್ನು ಕಲ್ಪಿಸುವ ರೂ.5.00 ಕೋಟಿಗಳ ಕಾಮಗಾರಿಯನ್ನು ಸದರಿ ಯೋಜನೆಯ ಉಳಿತಾಯದ ಮೊತ್ತದಲ್ಲಿ ಕೈಗೊಳ್ಳಲು ಟೆಂಡರ್ ಕರೆಯಲಾಗಿದ್ದು ಸದ್ಯದಲ್ಲೇ ಕಾಮಗಾರಿಯನ್ನು ಕೈಗೆತ್ತಿಕೊಳ್ಳಲಾಗುವುದು.<br>**2. ಹೆಬ್ಬಗೋಡಿ ನಗರ :**<br>ಹೆಬ್ಬಗೋಡಿ ನಗರಕ್ಕೆ ಒಳಚರಂಡಿ ಯೋಜನೆಯನ್ನು |

| | | |
|---|---|---|
| | | ಕಲ್ಪಿಸಲು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ರೂ.144.35 ಕೋಟಿಗಳಿಗೆ ಅಂದಾಜು ಪಟ್ಟಿಯನ್ನು ತಯಾರಿಸಿದ್ದು, ಮಂಡಳಿಯ ತಾಂತ್ರಿಕ ಪರಿಶೀಲನೆಯ ಹಂತದಲ್ಲಿದೆ.<br>**3. ಬೊಮ್ಮಸಂದ್ರ ಪಟ್ಟಣ :**<br>ಬೊಮ್ಮಸಂದ್ರ ಪಟ್ಟಣಕ್ಕೆ ಒಳಚರಂಡಿ ಯೋಜನೆಯನ್ನು ಕಲ್ಪಿಸಲು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಿಳಿಯು ರೂ.93.60 ಕೋಟಿಗಳಿಗೆ ಅಂದಾಜು ಪಟ್ಟಿಯನ್ನು ತಯಾರಿಸಿದ್ದು, ಮಂಡಳಿಯ ತಾಂತ್ರಿಕ ಪರಿಶೀಲನೆಯ ಹಂತದಲ್ಲಿದೆ.<br>**4. ಚಂದಾಪುರ ಮತ್ತು ಅತ್ತಿಬೆಲೆ :**<br>ಚಂದಾಪುರ ಮತ್ತು ಅತ್ತಿಬೆಲೆ ಪಟ್ಟಣಗಳಿಗೆ ಒಳಚರಂಡಿ ಕಲ್ಪಿಸಲು ಸ್ಥಳೀಯ ಸಂಸ್ಥೆಗಳಿಂದ ಯಾವುದೇ ಕೋರಿಕೆ ಬಂದಿರುವುದಿಲ್ಲ. |
| ಇ) | ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಸಮರ್ಪಕವಾದ ಒಳಚರಂಡಿ ಕಾಮಗಾರಿಯನ್ನು ಯಾವ ಕಾಲಮಿತಿಯಲ್ಲಿ ಪೂರ್ಣಗೊಳಿಸಲು ಸರ್ಕಾರದ ಯೋಜನೆ ರೂಪಿಸಿದೆ? (ಪೂರ್ಣ ಮಾಹಿತಿ ನೀಡುವುದು) | ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಸಮರ್ಪಕವಾದ ಒಳಚರಂಡಿ ಯೋಜನೆಗಳಿಗೆ ಸ್ಥಳೀಯ ಸಂಸ್ಥೆಗಳಿಂದ ಕೋರಿಕೆ ಬಂದಲ್ಲಿ ಹಾಗೂ ಯೋಜನೆಗೆ ಅಗತ್ಯವಿರುವ ಸ್ಥಳಗಳನ್ನು ಆಯಾ ಸ್ಥಳೀಯ ಸಂಸ್ಥೆಗಳು ಮಂಡಳಿಗೆ ಹಸ್ತಾಂತರಿಸಿದ ನಂತರ ಯೋಜನೆಗೆ ಅಂದಾಜು ಪಟ್ಟಿಯನ್ನು ಸಿದ್ಧಪಡಿಸಿ ಸರ್ಕಾರಕ್ಕೆ ಸೂಕ್ತ ಪ್ರಸ್ತಾವನೆ ಸಲ್ಲಿಸಿದಲ್ಲಿ ಅನುದಾನದ ಲಭ್ಯತೆಗನುಗುಣವಾಗಿ ಆಡಳಿತಾತ್ಮಕ ಅನುಮೋದನೆ ನೀಡಿ, ಮಂಡಳಿಯ ವತಿಯಿಂದ ಟೆಂಡರ್ ಕರೆದು ಮೂರು ವರ್ಷಗಳ ಕಾಲಾವಧಿಯೊಳಗೆ ಕಾಮಗಾರಿಯನ್ನು ಪೂರ್ಣಗೊಳಿಸಲು ಕ್ರಮ ಕೈಗೊಳ್ಳಲಾಗುವುದು. |

ನಅಇ 182 ಯುಎಂಎಸ್ 2020

(ಬಿ.ಎ.ಬಸವರಾಜ)
ನಗರಾಭಿವೃದ್ಧಿ ಸಚಿವರು



**ಕರ್ನಾಟಕ ಸರ್ಕಾರ**

ಸಂಖ್ಯೆ: ನಅಇ 189 ಯುಎಂಎಸ್ 2020

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸ ಸೌಧ,
ಬೆಂಗಳೂರು, ದಿನಾಂಕ:21-01-2021

**ಇವರಿಂದ,**

ಸರ್ಕಾರದ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ,
ವಿಕಾಸ ಸೌಧ,
ಬೆಂಗಳೂರು.

**ಇವರಿಗೆ,**

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ,
ಬೆಂಗಳೂರು.

ಮಾನ್ಯರೇ,

**ವಿಷಯ:** ವಿಧಾನ ಸಭೆಯ ಸದಸ್ಯರಾದ ಶ್ರೀ. ಐಹೊಳೆ ಡಿ. ಮಹಾಲಿಂಗಪ್ಪ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 148ಕ್ಕೆ ಉತ್ತರ ನೀಡುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ. ಐಹೊಳೆ ಡಿ. ಮಹಾಲಿಂಗಪ್ಪ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 148ಕ್ಕೆ ಸಂಬಂಧಿಸಿದ ಉತ್ತರದ **25** ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

**(ಲತಾ. ಕೆ)**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.
(ಎಂ.ಎ-2 & ಮಂಡಳಿ)

25/1/21

# ಕರ್ನಾಟಕ ವಿಧಾನಸಭೆ

| | |
|---|---|
| ಸದಸ್ಯರ ಹೆಸರು | ಶ್ರೀ ಐಹೋಳೆ ಡಿ. ಮಹಾಲಿಂಗಪ್ಪ (ರಾಯಭಾಗ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 148 |
| ಉತ್ತರಿಸಬೇಕಾದ ದಿನಾಂಕ | 11.12.2020 |
| ಉತ್ತರಿಸಬೇಕಾದವರು | ನಗರಾಭಿವೃದ್ಧಿ ಸಚಿವರು |

| ಅ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿ ಜಿಲ್ಲೆ ರಾಯಭಾಗ ಮತಕ್ಷೇತ್ರದ ವ್ಯಾಪ್ತಿಯ ರಾಯಭಾಗ ಪಟ್ಟಣದ ಸಾರ್ವಜನಿಕರಿಗೆ (24 x 7) ಕೃಷ್ಣಾ ನದಿಯಿಂದ ಕುಡಿಯುವ ನೀರು ಸರಬರಾಜು ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ರಾಯಭಾಗ ಪಟ್ಟಣಕ್ಕೆ ದಿಗ್ಗೇವಾಡಿ ಬಳಿ ಕೃಷ್ಣಾ ನದಿಯಿಂದ ನೀರು ಸರಬರಾಜು ಮಾಡಲು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ರೂ.6560.00 ಲಕ್ಷಗಳಿಗೆ ಅಂದಾಜು ಪಟ್ಟಿಯನ್ನು ತಯಾರಿಸಿ ದಿನಾಂಕ 18-05-2020 ರಂದು ಆಡಳಿತಾತ್ಮಕ ಅನುಮೋದನೆಗಾಗಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದು, ಸದರಿ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿದೆ. |
| ಆ) | ಹಾಗಿದ್ದಲ್ಲಿ, ಪ್ರಸ್ತಾವನೆಯು ಪ್ರಸ್ತುತ ಯಾವ ಹಂತದಲ್ಲಿದೆ; | |
| ಇ) | ಸದರಿ ಪ್ರಸ್ತಾವನೆಗೆ ಯಾವ ಕಾಲಮಿತಿಯಲ್ಲಿ ಮಂಜೂರಾತಿ ನೀಡಿ, ಕ್ರಿಯಾ ಯೋಜನೆಯಲ್ಲಿ ಸೇರ್ಪಡಿಸಿ, ಕಾಮಗಾರಿ ಆರಂಭಿಸಲಾಗುವುದು; | ಪ್ರಸ್ತಾವನೆಗೆ ಸರ್ಕಾರವು ಅನುಮೋದನೆ ನೀಡಿದ ನಂತರ, ಮಂಡಳಿಯ ಕ್ರಿಯಾ ಯೋಜನೆಯಲ್ಲಿ ಅವಕಾಶ ಕಲ್ಪಿಸಿ ಟೆಂಡರ ಮೂಲಕ 3 ವರ್ಷಗಳ ಕಾಲಮಿತಿಯಲ್ಲಿ ಯೋಜನೆಯನ್ನು ಅನುಷ್ಠಾನಗೊಳಿಸಲಾವುದು. |
| ಈ) | ಇಲ್ಲದಿದ್ದಲ್ಲಿ, ರಾಯಭಾಗ ಪಟ್ಟಣದ ಸಾರ್ವಜನಿಕರಿಗೆ ಕೃಷ್ಣಾ ನದಿಯಿಂದ (24 x 7) ಕುಡಿಯುವ ನೀರು ಸರಬರಾಜು ಮಾಡಲು ಸರ್ಕಾರಕ್ಕಿರುವ ತೊಂದರೆಗಳೇನು; ಈ ಯೋಜನೆಯನ್ನು ಯಾವ ಕಾಲಮಿತಿಯಲ್ಲಿ ಪ್ರಾರಂಭಿಸಲಾಗುವುದು? (ಸಂಪೂರ್ಣ ವಿವರ ನೀಡುವುದು) | |

ಸಂಖ್ಯೆ ನಅಇ 189 ಯುಎಂಎಸ್ 2020

(ಬಿ.ಎ.ಬಸವರಾಜ)
ನಗರಾಭಿವೃದ್ಧಿ ಸಚಿವರು



**ಕರ್ನಾಟಕ ಸರ್ಕಾರ**

ಸಂಖ್ಯೆ: ನಅಇ 168 ಯುಎಂಎಸ್ 2020

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸ ಸೌಧ,
ಬೆಂಗಳೂರು, ದಿನಾಂಕ:21-01-2021

**ಇವರಿಂದ,**

ಸರ್ಕಾರದ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ,
ವಿಕಾಸ ಸೌಧ,
ಬೆಂಗಳೂರು.

**ಇವರಿಗೆ,**

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ,
ಬೆಂಗಳೂರು.

ಮಾನ್ಯರೇ,

**ವಿಷಯ:** ವಿಧಾನ ಸಭೆಯ ಸದಸ್ಯರಾದ ಶ್ರೀ. ಉಮೇಶ್ ವಿಶ್ವನಾಥ್ ಕತ್ತಿ(ಹುಕ್ಕೇರಿ)ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 983ಕ್ಕೆ ಉತ್ತರ ನೀಡುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ. ಉಮೇಶ್ ವಿಶ್ವನಾಥ್ ಕತ್ತಿ(ಹುಕ್ಕೇರಿ)ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 983ಕ್ಕೆ ಸಂಬಂಧಿಸಿದ ಉತ್ತರದ **25** ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

**(ಲತಾ. ಕೆ)**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.
(ಎಂ.ಎ-2 & ಮಂಡಳಿ)

25/1/21

# ಕರ್ನಾಟಕ ವಿಧಾನಸಭೆ

| | | |
|---|---|---|
| ಸದಸ್ಯರ ಹೆಸರು | : | ಶ್ರೀ ಉಮೇಶ್ ವಿಶ್ವನಾಥ್ ಕತ್ತಿ (ಹುಕ್ಕೇರಿ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 983 |
| ಉತ್ತರಿಸಬೇಕಾದ ದಿನಾಂಕ | : | 11.12.2020 |
| ಉತ್ತರಿಸಬೇಕಾದವರು | : | ನಗರಾಭಿವೃದ್ಧಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಸಂಕೇಶ್ವರ ಪುರಸಭೆ ವ್ಯಾಪ್ತಿಯಲ್ಲಿ ಒಳಚರಂಡಿ ನಿರ್ಮಾಣ ಮಾಡಲು ಅನುಮೋದನೆ ನೀಡಲಾಗಿದೆಯೇ; | ಹೌದು. |
| ಆ) | ಹಾಗಿದ್ದಲ್ಲಿ, ಈ ಮೊದಲು ಯಾವಾಗ ಅನುಮೋದನೆ ನೀಡಲಾಗಿತ್ತು ಮತ್ತು ಎಷ್ಟು ಅನುದಾನಕ್ಕೆ ಅನುಮೋದನೆ ನೀಡಲಾಗಿತ್ತು: (ವಿವರ ನೀಡುವುದು) | ಸಂಕೇಶ್ವರ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆ ಒದಗಿಸಲು ರೂ.1981.00 ಲಕ್ಷಗಳ ಅಂದಾಜು ಪಟ್ಟಿಗೆ ದಿನಾಂಕ: 05-06-2012 ರಂದು ಆಡಳಿತಾತ್ಮಕ ಅನುಮೋದನೆ ನೀಡಲಾಗಿರುತ್ತದೆ. |
| ಇ) | ಈ ಒಳಚರಂಡಿ ಕಾಮಗಾರಿಗಳಿಗೆ ಮರು ಅಂದಾಜು ತಯಾರಿಸಲಾಗಿದೆಯೇ: ಹಾಗಿದ್ದಲ್ಲಿ ಮರು ಅಂದಾಜಿನ ಪ್ರಕಾರ ಸದರಿ ಕಾಮಗಾರಿಗಳ ಅಂದಾಜು ಮೊತ್ತವೆಷ್ಟು (ಪೂರ್ಣ ವಿವರ ನೀಡುವುದು) | ಹೌದು.<br>ಸಂಕೇಶ್ವರ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆ ಕಲ್ಪಿಸಲು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ವತಿಯಿಂದ ರೂ.9660.00 ಲಕ್ಷಗಳಿಗೆ ಮಾರ್ಪಡಿತ ಅಂದಾಜು ಪಟ್ಟಿಯನ್ನು ತಯಾರಿಸಿ ಆಡಳಿತಾತ್ಮಕ ಅನುಮೋದನೆಗಾಗಿ ದಿನಾಂಕ 08-05-2019 ರಂದು ಸರ್ಕಾರಕ್ಕೆ ಸಲ್ಲಿಸಿದ್ದು, ಸದರಿ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿದೆ |
| (ಈ) | ಮರು ಅಂದಾಜಿನ ಪ್ರಕಾರ ಸದರಿ ಕಾಮಗಾರಿಗಳಿಗೆ ಅನುಮೋದನೆ ನೀಡಲು ಸರ್ಕಾರ ಕೈಗೊಂಡ ಕ್ರಮಗಳೇನು: | |
| (ಉ) | ಈ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಸರ್ಕಾರ ಹಾಕಿಕೊಂಡ ಕಾಲಮಿತಿಯೇನು? (ವಿವರ ನೀಡುವುದು) | ಅನುದಾನದ ಲಭ್ಯತೆಗನುಗುಣವಾಗಿ ಆಡಳಿತಾತ್ಮಕ ಅನುಮೋದನೆ ನೀಡಿದ ನಂತರ 3 ವರ್ಷಗಳ ಅವಧಿಯಲ್ಲಿ ಯೋಜನೆಯನ್ನು ಅನುಷ್ಠಾನಗೊಳಿಸಲು ಕ್ರಮ ಕೈಗೊಳ್ಳಲಾಗುವುದು. |

ಸಂಖ್ಯೆ ನಅಇ 168 ಯುಎಂಎಸ್ 2020

(ಬಿ.ಎ.ಬಸವರಾಜ)
ನಗರಾಭಿವೃದ್ಧಿ ಸಚಿವರು



# ಕರ್ನಾಟಕ ಸರ್ಕಾರ

ಸಂಖ್ಯೆ:ನಅಇ 08 ಎಸ್.ಎಫ್.ಸಿ 2021

ಕರ್ನಾಟಕ ಸರ್ಕಾರ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ:25-01-2021.

**ಇವರಿಂದ:**
ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
ನಗರಾಭಿವೃದ್ಧಿ ಇಲಾಖೆ,
ಬೆಂಗಳೂರು.

**ಇವರಿಗೆ,**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ,
ವಿಧಾನಸೌಧ,
ಬೆಂಗಳೂರು.

**ಮಾನ್ಯರೇ,**

**ವಿಷಯ:** ಮಾನ್ಯ ವಿಧಾನಸಭೆ ಸದಸ್ಯರಾದ ಶ್ರೀ ಅಬ್ಬಯ್ಯ ಪ್ರಸಾದ್ (ಹುಬ್ಬಳ್ಳಿ-ಧಾರವಾಡ ಪೂರ್ವ) ರವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1067ಕ್ಕೆ ಉತ್ತರಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂದಿಸಿದಂತೆ, ಮಾನ್ಯ ವಿಧಾನಸಭೆ ಸದಸ್ಯರಾದ ಶ್ರೀ ಅಬ್ಬಯ್ಯ ಪ್ರಸಾದ್ (ಹುಬ್ಬಳ್ಳಿ-ಧಾರವಾಡ ಪೂರ್ವ) ರವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1067 ಕ್ಕೆ ಉತ್ತರದ 10 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲು ನಾನು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,
ಲಲಿತಾಬಾಯಿ.ಕೆ

**(ಲಲಿತಾಬಾಯಿ ಕೆ.)**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ.

**ಪ್ರತಿ ಅಗತ್ಯ ಕ್ರಮಕ್ಕಾಗಿ:**
1) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ.
2) ಸರ್ಕಾರದ ಅಧೀನ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ (ಸಮನ್ವಯ).

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1067 |
| ಸದಸ್ಯರ ಹೆಸರು | : | ಶ್ರೀ ಅಬ್ಬಯ್ಯ ಪ್ರಸಾದ್ (ಹುಬ್ಬಳ್ಳಿ-ಧಾರವಾಡ ಪೂರ್ವ) |
| ಉತ್ತರಿಸಬೇಕಾದ ದಿನಾಂಕ | : | 11-12-2020 |
| ಉತ್ತರಿಸುವ ಸಚಿವರು | : | ಮಾನ್ಯ ನಗರಾಭಿವೃದ್ಧಿ ಸಚಿವರು |

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>(ಅ)</td><td>ಹುಬ್ಬಳ್ಳಿ ಧಾರವಾಡ ಮಹಾನಗರ ಪಾಲಿಕೆಗೆ ಸರ್ಕಾರದ ವತಿಯಿಂದ 2018 ರಿಂದ 2020 ರವರೆಗೆ ಎಷ್ಟು ಅನುದಾನ ಬಿಡುಗಡೆ ಮಾಡಲಾಗಿದೆ;</td><td>
ಹುಬ್ಬಳ್ಳಿ ಧಾರವಾಡ ಮಹಾನಗರ ಪಾಲಿಕೆಗೆ ಸರ್ಕಾರದ ವತಿಯಿಂದ 2018 ರಿಂದ 2020 ರವರೆಗೆ ಸ್ವಚ್ಛ ಭಾರತ್ ಮಿಷನ್ ಯೋಜನೆ, 14ನೇ ಹಣಕಾಸು ಆಯೋಗ, ಕೇಂದ್ರ ಪುರಸ್ಕೃತ 'ಅಮೃತ್' ಯೋಜನೆ, 15ನೇ ಹಣಕಾಸು ಆಯೋಗ, ಮಾನ್ಯ ಮುಖ್ಯಮಂತ್ರಿಗಳ ರೂ. 100.00 ಕೋಟಿ ನಗರೋತ್ಥಾನ 2ನೇ ಹಂತ ಮತ್ತು 3ನೇ ಹಂತದ ಯೋಜನೆ, ವಿಶೇಷ ಅನುದಾನ ಮತ್ತು ಎಸ್.ಎಫ್.ಸಿ. ಮುಕ್ತ ನಿಧಿ, ಎಸ್.ಎಫ್.ಸಿ. ಕುಡಿಯುವ ನೀರು ಮತ್ತು ಎಸ್.ಎಫ್.ಸಿ. ವಿಶೇಷ ಅನುದಾನದ ಯೋಜನೆಗಳು ಅನುಮೋದನೆಯಾಗಿದ್ದು, ಯೋಜನೆವಾರು ವಿವರಗಳು ಈ ಕೆಳಕಂಡಂತಿವೆ.<br><br>
1) <u>ಸ್ವಚ್ಛ ಭಾರತ್ ಅಭಿಯಾನ:</u><br><br>
ಕೇಂದ್ರ ಪುರಸ್ಕೃತ ಸ್ವಚ್ಛ ಭಾರತ್ ಮಿಷನ್ ಯೋಜನೆಯಡಿ 2018 ರಿಂದ 2020ರವರೆಗೆ ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಗೆ ಬಿಡುಗಡೆಯಾದ ಅನುದಾನದ ವಿವರ ಈ ಕೆಳಕಂಡಂತಿರುತ್ತದೆ;<br><br>
(ರೂ ಲಕ್ಷಗಳಲ್ಲಿ)
<table>
<tr><th>2018-19</th><th>2019-20</th><th>ಒಟ್ಟು</th></tr>
<tr><td>477.39</td><td>578.68</td><td>1056.07</td></tr>
</table>
<br>
2) <u>14ನೇ ಹಣಕಾಸು ಆಯೋಗದ ಅನುದಾನ:</u><br>
ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಗೆ 2018-19 ಮತ್ತು 2019-20ನೇ ಸಾಲಿನಲ್ಲಿ 14ನೇ ಹಣಕಾಸು ಆಯೋಗದ ಅನುದಾನದಡಿ ಬಿಡುಗಡೆಯಾದ ವಿವರಗಳು ಈ ಕೆಳಕಂಡಂತಿದೆ;<br>
(ರೂ. ಲಕ್ಷಗಳಲ್ಲಿ)
<table>
<tr><th>ಅನುದಾನ / ಯೋಜನೆ</th><th>ಬಿಡುಗಡೆ</th></tr>
<tr><td>2018-19ನೇ ಸಾಲಿನ ಸಾಮಾನ್ಯ ಮೂಲ ಅನುದಾನ</td><td>3819.00</td></tr>
<tr><td>2019-20ನೇ ಸಾಲಿನ ಸಾಮಾನ್ಯ ಮೂಲ ಅನುದಾನ</td><td>5124.95</td></tr>
<tr><td>2017-18ನೇ ಸಾಲಿನ ಸಾಮಾನ್ಯ ಕಾರ್ಯನಿರ್ವಹಣಾ ಅನುದಾನ (2019-20ನೇ ಸಾಲಿನಲ್ಲಿ ಬಿಡುಗಡೆಗೊಳಸಲಾಗಿದೆ)</td><td>1038.98</td></tr>
<tr><td>ಒಟ್ಟು</td><td>9982.93</td></tr>
</table>
<br>
3) <u>ಕೇಂದ್ರ ಪುರಸ್ಕೃತ ಅಮೃತ್ ಯೋಜನೆ:</u><br>
ಕೇಂದ್ರ ಪುರಸ್ಕೃತ ಅಮೃತ್ ಯೋಜನೆಯಡಿ 1 ಲಕ್ಷಕ್ಕಿಂತ ಹೆಚ್ಚಿನ ಜನಸಂಖ್ಯೆ ಇರುವ ಹುಬ್ಬಳ್ಳಿ-ಧಾರವಾಡ ಮಹಾನಗರಪಾಲಿಕೆಯು ಆಯ್ಕೆಯಾಗಿದ್ದು, ಯೋಜನೆಯಡಿ ಹುಬ್ಬಳ್ಳಿ-ಧಾರವಾಡ ಮಹಾನಗರಪಾಲಿಕೆಗೆ ಅನುಮೋದನೆಯಾದ ಅನುದಾನದ ಅನುಪಾತ ಕೇಂದ್ರ 50%: ರಾಜ್ಯ 20%:
</td></tr>
</table>

| | | |
|---|---|---|
| | | ನಗರ ಸ್ಥಳೀಯ ಸಂಸ್ಥೆ 30% ರಂತೆ ಒಟ್ಟು ಅನುದಾನ ರೂ. 176.76 ಕೋಟಿ ಹಂಚಿಕೆಯಾಗಿದ್ದು, 2015-16ನೇ ಸಾಲಿನಿಂದ ಈತನಕ ಒಳಚರಂಡಿ ಯೋಜನೆಗೆ ಮತ್ತು ಉದ್ಯಾನವನ ಅಭಿವೃದ್ಧಿ ಕಾಮಗಾರಿಗಳಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಒಟ್ಟು ಅನುದಾನ ರೂ. 111.68 ಕೋಟಿಯನ್ನು ಬಿಡುಗಡೆಗೊಳಿಸಲಾಗಿದೆ (ವಿವರಗಳನ್ನು ಅನುಬಂಧ-1ರಲ್ಲಿ ಒದಗಿಸಿದೆ).<br><br>4) <u>ಮಾನ್ಯ ಮುಖ್ಯಮಂತ್ರಿಗಳ ರೂ. 100.00 ಕೋಟಿ ನಗರೋತ್ಥಾನ 2ನೇ ಹಂತ ಮತ್ತು 3ನೇ ಹಂತದ ಯೋಜನೆ, ವಿಶೇಷ ಅನುದಾನ:</u><br>ಹುಬ್ಬಳ್ಳಿ-ಧಾರವಾಡ ಮಹಾನಗರಪಾಲಿಕೆಗೆ ಬಿಡುಗಡೆಯಾದ ಅನುದಾನದ ವಿವರಗಳು ಈ ಕೆಳಕಂಡಂತಿದೆ; |

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಯೋಜನೆ | ಬಿಡುಗಡೆ 2018-19 | ಬಿಡುಗಡೆ 2019-20 |
|---|---|---|---|
| 1 | ರೂ. 100 ಕೋಟಿ 2ನೇ ಹಂತದ ಯೋಜನೆ | 1335.00 | 277.27 |
| 2 | ರೂ. 100 ಕೋಟಿ 3ನೇ ಹಂತದ ಯೋಜನೆ | 1191.68 | 0.00 |
| 3 | ವಿಶೇಷ ಅನುದಾನ | 3079.46 | 894.67 |

5) <u>ಎಸ್.ಎಫ್.ಸಿ ಅನುದಾನ:</u>

ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಗೆ 2018-19 ರಿಂದ 2020-21ನೇ ಸಾಲಿನವರೆಗೆ ಬಿಡುಗಡೆಯಾದ ಅನುದಾನದ ವಿವರ ಈ ಕೆಳಕಂಡಂತಿದೆ.

(ರೂ. ಲಕ್ಷಗಳಲ್ಲಿ)

| ಯೋಜನೆ | ವರ್ಷ | ಹಂಚಿಕೆಯಾದ ಅನುದಾನ | ಬಿಡುಗಡೆಯಾದ ಅನುದಾನ |
|---|---|---|---|
| ಎಸ್.ಎಫ್.ಸಿ ಮುಕ್ತನಿಧಿ | 2018-19 ರಿಂದ 2020-21 | 7488.05 | 5595.28 |
| ಎಸ್.ಎಫ್.ಸಿ ಕುಡಿಯುವ ನೀರು | 2018-19 ರಿಂದ 2020-21 | 142.73 | 142.73 |
| ಎಸ್.ಎಫ್.ಸಿ ವಿಶೇಷ ಅನುದಾನ | 2018-19 ರಿಂದ 2020-21 | 2500.00 | 1000.00 |
| | ಒಟ್ಟು: | 10130.78 | 6738.01 |

| | | |
|---|---|---|
| (ಆ) | ಯಾವ ಯಾವ ಯೋಜನೆಯಲ್ಲಿ ಎಷ್ಟೆಷ್ಟು ಅನುದಾನ ಬಿಡುಗಡೆ ಮಾಡಲಾಗಿದೆ? (ಕ್ಷೇತ್ರವಾರು ವಿವರ ನೀಡುವುದು) | ಸ್ವಚ್ಛ ಭಾರತ್ ಮಿಷನ್ ಯೋಜನೆ, 14ನೇ ಹಣಕಾಸು ಆಯೋಗ, ಕೇಂದ್ರ ಪುರಸ್ಕೃತ 'ಅಮೃತ್' ಯೋಜನೆ, 15ನೇ ಹಣಕಾಸು ಆಯೋಗ, ಮಾನ್ಯ ಮುಖ್ಯಮಂತ್ರಿಗಳ ರೂ. 100.00 ಕೋಟಿ ನಗರೋತ್ಥಾನ 2ನೇ ಹಂತ ಮತ್ತು 3ನೇ ಹಂತದ ಯೋಜನೆ, ವಿಶೇಷ ಅನುದಾನ ಮತ್ತು ಎಸ್.ಎಫ್.ಸಿ. ಮುಕ್ತ ನಿಧಿ, ಎಸ್.ಎಫ್.ಸಿ. ಕುಡಿಯುವ ನೀರು ಮತ್ತು ಎಸ್.ಎಫ್.ಸಿ. ವಿಶೇಷ ಅನುದಾನದ ಯೋಜನೆಯ ವಿವರಗಳನ್ನು ಈ ಕೆಳಕಂಡಂತೆ ವಿವರಿಸಿದೆ.<br><br>1) <u>ಸ್ವಚ್ಛ ಭಾರತ್ ಮಿಷನ್ ಯೋಜನೆ:</u><br><br>ಕೇಂದ್ರ ಪುರಸ್ಕೃತ ಸ್ವಚ್ಛ ಭಾರತ್ ಮಿಷನ್ ಯೋಜನೆಯಡಿ ಹುಬ್ಬಳ್ಳಿ-ಧಾರವಾಡ ಕ್ಷೇತ್ರದಲ್ಲಿ ಬರುವ ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಗೆ ಈವರೆಗೆ ರೂ 18.88 ಕೋಟಿಗಳ ಅನುದಾನವನ್ನು ಬಿಡುಗಡೆ ಮಾಡಲಾಗಿರುತ್ತದೆ. |

2) 14ನೇ ಹಣಕಾಸು ಆಯೋಗ:

ಹುಬ್ಬಳ್ಳಿ-ಧಾರವಾಡ ಮಹಾನಗರಪಾಲಿಕೆಗೆ 14ನೇ ಹಣಕಾಸು ಆಯೋಗದ ಅನುದಾನದಡಿ 2015-16ನೇ ಸಾಲಿನಿಂದ 2019-20ನೇ ಸಾಲಿನ ವರೆಗೆ ಒಟ್ಟು ರೂ. 19538.12 ಲಕ್ಷಗಳನ್ನು ಬಿಡುಗಡೆಗೊಳಿಸಲಾಗಿರುತ್ತದೆ.

3) ಕೇಂದ್ರ ಪುರಸ್ಕೃತ ಅಮೃತ್ ಯೋಜನೆ:

ಕೇಂದ್ರ ಪುರಸ್ಕೃತ ಅಮೃತ್ ಯೋಜನೆಯಡಿ 2015-16ನೇ ಸಾಲಿನಿಂದ ಒಟ್ಟು ರೂ. 111.68 ಕೋಟಿ ಬಿಡುಗಡೆಗೊಳಿಸಲಾಗಿರುತ್ತದೆ.

4) 15ನೇ ಹಣಕಾಸು ಆಯೋಗ:

15ನೇ ಹಣಕಾಸು ಆಯೋಗದ ಅನುದಾನದಡಿ 2020-21ನೇ ಸಾಲಿಗೆ ಹುಬ್ಬಳ್ಳಿ-ಧಾರವಾಡ ಮಹಾನಗರಪಾಲಿಕೆಗೆ ಒಟ್ಟು ಅನುದಾನ ರೂ. 51.56 ಕೋಟಿ ಹಂಚಿಕೆ ಮಾಡಿ, ಮೊದಲನೆಯ ಕಂತಿನ ಅನುದಾನ ರೂ. 25.78 ಕೋಟಿಗಳನ್ನು ಬಿಡುಗಡೆಗೊಳಿಸಲಾಗಿರುತ್ತದೆ.

5) ಮಾನ್ಯ ಮುಖ್ಯಮಂತ್ರಿಗಳ ರೂ. 100.00 ಕೋಟಿ ನಗರೋತ್ಥಾನ 2ನೇ ಹಂತ ಮತ್ತು 3ನೇ ಹಂತದ ಯೋಜನೆ, ವಿಶೇಷ ಅನುದಾನ:

ಹುಬ್ಬಳ್ಳಿ-ಧಾರವಾಡ ಮಹಾನಗರಪಾಲಿಕೆಗೆ ಬಿಡುಗಡೆಯಾದ ಅನುದಾನದ ವಿವರಗಳು ಈ ಕೆಳಗಿನಂತಿದೆ.

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಯೋಜನೆ | ಬಿಡುಗಡೆ | |
|---|---|---|---|
| | | 2018-19 | 2019-20 |
| 1 | ರೂ. 100 ಕೋಟಿ 2ನೇ ಹಂತದ ಯೋಜನೆ | 1335.00 | 277.27 |
| 2 | ರೂ. 100 ಕೋಟಿ 3ನೇ ಹಂತದ ಯೋಜನೆ | 1191.68 | 0.00 |
| 3 | ವಿಶೇಷ ಅನುದಾನ | 3079.46 | 894.67 |

ಮಾನ್ಯ ಮುಖ್ಯಮಂತ್ರಿಗಳ ರೂ. 100.00 ಕೋಟಿ ನಗರೋತ್ಥಾನ 2ನೇ ಹಂತ ಮತ್ತು 3ನೇ ಹಂತದ ಯೋಜನೆ, ವಿಶೇಷ ಅನುದಾನವು ಕ್ಷೇತ್ರವಾರು ವಿಂಗಡಣೆ ಮಾಡುತ್ತಿರುವುದಿಲ್ಲ.

6) ಎಸ್.ಎಫ್.ಸಿ ಅನುದಾನ:

ಎಸ್.ಎಫ್.ಸಿ. ಅನುದಾನದಡಿ ಬಿಡುಗಡೆಯಾದ ಅನುದಾನದ ವಿವರಗಳು ಈ ಕೆಳಕಂಡಂತಿವೆ:

ಎಸ್.ಎಫ್.ಸಿ ಮುಕ್ತನಿಧಿ ಅನುದಾನ:

(ರೂ. ಲಕ್ಷಗಳಲ್ಲಿ)

| ವರ್ಷ | ಹಂಚಿಕೆಯಾದ ಅನುದಾನ | ಬಿಡುಗಡೆಯಾದ ಅನುದಾನ |
|---|---|---|
| 2018-19 | 3443.75 | 2790.50 |
| 2019-20 | 2953.00 | 2417.37 |
| 2020-21 | 1091.30 | 387.41 |
| **ಒಟ್ಟು:** | **7488.05** | **5595.28** |

**ಎಸ್.ಎಫ್.ಸಿ ಕುಡಿಯುವ ನೀರು ಅನುದಾನ:**

(ರೂ. ಲಕ್ಷಗಳಲ್ಲಿ)

| ವರ್ಷ | ಹಂಚಿಕೆಯಾದ ಅನುದಾನ | ಬಿಡುಗಡೆಯಾದ ಅನುದಾನ |
|---|---|---|
| 2018-19 | 46.01 | 46.01 |
| 2019-20 | 85.47 | 85.47 |
| 2020-21 | 11.25 | 11.25 |
| **ಒಟ್ಟು:** | **142.73** | **142.73** |

**ಎಸ್.ಎಫ್.ಸಿ ವಿಶೇಷ ಅನುದಾನ:**

(ರೂ. ಲಕ್ಷಗಳಲ್ಲಿ)

| ವರ್ಷ | ಹಂಚಿಕೆಯಾದ ಅನುದಾನ | ಬಿಡುಗಡೆಯಾದ ಅನುದಾನ |
|---|---|---|
| 2018-19 | 0.00 | 0.00 |
| 2019-20 | 2500.00 | 1000.00 |
| 2020-21 | 0.00 | 0.00 |
| **ಒಟ್ಟು:** | **2500.00** | 1000.00 |

ಕಡತ ಸಂಖ್ಯೆ:ನಅಇ 8 ಎಸ್.ಎಫ್.ಸಿ 2021

(ಬಿ.ಎ ಬಸವರಾಜ)
ನಗರಾಭಿವೃದ್ಧಿ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ:ಆನಾಸ 324 ಡಿಆರ್‌ಎ 2020 (ಇ-ಆಫೀಸ್)

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ, ನೆಲಮಹಡಿ
ಬೆಂಗಳೂರು ದಿನಾಂಕ:19.01.2021

ಇವರಿಂದ,

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ
ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆ

ಇವರಿಗೆ,

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಡಾ|| ಯತೀಂದ್ರ ಸಿದ್ಧರಾಮಯ್ಯ (ವರುಣ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1038 ಗೆ ಉತ್ತರ ನೀಡುವ ಬಗ್ಗೆ.

ಉಲ್ಲೇಖ: ಕಾರ್ಯದರ್ಶಿಯವರ ಪರವಾಗಿ, ಕರ್ನಾಟಕ ವಿಧಾನ ಸಭೆ ಇವರ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/8ಅ/ಪ್ರ.ಸಂ1038/2020, ದಿನಾಂಕ:04.12.2020

******

ಮಾನ್ಯ ವಿಧಾನ ಸಭೆಯ ಸದಸ್ಯರಾದ ಡಾ|| ಯತೀಂದ್ರ ಸಿದ್ಧರಾಮಯ್ಯ (ವರುಣ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1038 ಕ್ಕೆ ಉತ್ತರವನ್ನು ಸಿದ್ಧಪಡಿಸಿ, ಅದರ 30 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

(ವಿ.ವೆಂಕಟೇಶ್)
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು, ಗ್ರಾಹಕರ ವ್ಯವಹಾರಗಳ
ಮತ್ತು ಕಾನೂನು ಮಾಪನಶಾಸ್ತ್ರ ಇಲಾಖೆ.

ಪ್ರತಿ:

1. ಮಾನ್ಯ ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನಸೌಧ, ಬೆಂಗಳೂರು.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆಯ ಆಪ್ತ ಕಾರ್ಯದರ್ಶಿ, ವಿಕಾಸಸೌಧ, ಬೆಂಗಳೂರು.
3. ಸರ್ಕಾರದ ಉಪ ಕಾರ್ಯದರ್ಶಿ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆಯ ಆಪ್ತ ಸಹಾಯಕ, ವಿಕಾಸಸೌಧ, ಬೆಂಗಳೂರು.
4. ಸರ್ಕಾರದ ಅಧೀನ ಕಾರ್ಯದರ್ಶಿ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆ, ವಿಕಾಸಸೌಧ, ಬೆಂಗಳೂರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **1038**

ವಿಧಾನ ಸಭೆ ಸದಸ್ಯರ ಹೆಸರು : ಡಾ|| ಯತೀಂದ್ರ ಸಿದ್ದರಾಮಯ್ಯ (ವರುಣ)

ಉತ್ತರಿಸಬೇಕಾದ ದಿನಾಂಕ : 11.12.2020

ಉತ್ತರಿಸುವ ಸಚಿವರು : ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಅನ್ನಭಾಗ್ಯ ಯೋಜನೆಯಲ್ಲಿ ಎಷ್ಟು ಕೆ.ಜಿ ಅಕ್ಕಿಯನ್ನು ವಿತರಣೆ ಮಾಡಲಾಗುತ್ತಿದೆ. (ಮಾಹಿತಿ ನೀಡುವುದು); | ಅನ್ನಭಾಗ್ಯ ಯೋಜನೆಯಡಿ ಪ್ರತಿ ಮಾಹೆ ಅಂತ್ಯೋದಯ ಪಡಿತರ ಚೀಟಿಗೆ 35 ಕೆ.ಜಿ. ಮತ್ತು ಆದ್ಯತಾ ಪಡಿತರ ಚೀಟಿಯ ಪ್ರತಿ ಫಲಾನುಭವಿಗೆ 5 ಕೆ.ಜಿ. ಅಕ್ಕಿಯನ್ನು ಉಚಿತವಾಗಿ ವಿತರಿಸಲಾಗುತ್ತಿದೆ. |
| ಆ | ಅನ್ನಭಾಗ್ಯ ಯೋಜನೆಯಲ್ಲಿ ವಿತರಣೆ ಮಾಡುವ ಅಕ್ಕಿಯ ಪ್ರಮಾಣವನ್ನು ಕಡಿತಗೊಳಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; ಇದ್ದಲ್ಲಿ, ಎಷ್ಟು ಕಡಿಮೆ ಮಾಡಲು ಉದ್ದೇಶಿಸಲಾಗಿದೆ ಹಾಗೂ ಕಡಿತಗೊಳಿಸಲು ಕಾರಣವೇನು (ಮಾಹಿತಿ ನೀಡುವುದು); | ಇಲ್ಲ. |
| ಇ | ಅಕ್ಕಿ ಕಡಿತದಿಂದ ಬಡವರಿಗೆ, ಕೂಲಿ ಕಾರ್ಮಿಕರಿಗೆ ತೊಂದರೆಯಾಗುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರ ಕೈಗೊಂಡಿರುವ ಕ್ರಮವೇನು (ಮಾಹಿತಿ ನೀಡುವುದು)? | ಉದ್ಭವಿಸುವುದಿಲ್ಲ. |

ಆನಾಸ 324 ಡಿಆರ್ ಎ 2020 (ಇ-ಆಫೀಸ್)

(ಕೆ.ಗೋಪಾಲಯ್ಯ)
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

**ಕರ್ನಾಟಕ ಸರ್ಕಾರ**

ಸಂಖ್ಯೆ:ಆನಾಸ 326 ಡಿಆರ್‌ಎ 2020 (ಇ-ಆಫೀಸ್)

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ, ನೆಲಮಹಡಿ
ಬೆಂಗಳೂರು ದಿನಾಂಕ:19.01.2021

ಇವರಿಂದ,

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ
ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆ

ಇವರಿಗೆ,

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ನರೇಂದ್ರ ಆರ್ (ಹನೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1052 ಗೆ ಉತ್ತರ ನೀಡುವ ಬಗ್ಗೆ.
ಕಾರ್ಯದರ್ಶಿಯವರ ಪರವಾಗಿ, ಕರ್ನಾಟಕ ವಿಧಾನ ಸಭೆ ಇವರ ಪತ್ರ ಸಂಖ್ಯೆ:

ಉಲ್ಲೇಖ: ಪ್ರಶಾವಿಸ/15ನೇವಿಸ/8ಅ/ಪ್ರ.ಸಂ1052/2020, ದಿನಾಂಕ:05.12.2020

******

ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ನರೇಂದ್ರ ಆರ್ (ಹನೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1052 ಕ್ಕೆ ಉತ್ತರವನ್ನು ಸಿದ್ಧಪಡಿಸಿ, ಅದರ 30 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

(ವಿ.ವೆಂಕಟೇಶ್)
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು, ಗ್ರಾಹಕರ ವ್ಯವಹಾರಗಳ
ಮತ್ತು ಕಾನೂನು ಮಾಪನಶಾಸ್ತ್ರ ಇಲಾಖೆ.

**ಪ್ರತಿ:**

1. ಮಾನ್ಯ ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನಸೌಧ, ಬೆಂಗಳೂರು.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆಯ ಆಪ್ತ ಕಾರ್ಯದರ್ಶಿ, ವಿಕಾಸಸೌಧ, ಬೆಂಗಳೂರು.
3. ಸರ್ಕಾರದ ಉಪ ಕಾರ್ಯದರ್ಶಿ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆಯ ಆಪ್ತ ಸಹಾಯಕ, ವಿಕಾಸಸೌಧ, ಬೆಂಗಳೂರು.
4. ಸರ್ಕಾರದ ಅಧೀನ ಕಾರ್ಯದರ್ಶಿ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆ, ವಿಕಾಸಸೌಧ, ಬೆಂಗಳೂರು.

20/1/21

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1052

ವಿಧಾನ ಸಭೆ ಸದಸ್ಯರ ಹೆಸರು : ಶ್ರೀ ನರೇಂದ್ರ ಆರ್. (ಹನೂರು)

ಉತ್ತರಿಸಬೇಕಾದ ದಿನಾಂಕ : 11.12.2020

ಉತ್ತರಿಸುವ ಸಚಿವರು : ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಚಾಮರಾಜನಗರ ಜಿಲ್ಲೆಯ ಹನೂರು ತಾಲ್ಲೂಕು ಕೇಂದ್ರವಾಗಿದ್ದು, ಇಲ್ಲಿ ಆಹಾರ ನಾಗರಿಕ ಸರಬರಾಜು ಇಲಾಖೆಯ ಯಾವುದೇ ಕಛೇರಿಯನ್ನು ತೆರೆಯದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು<br>ನೂತನವಾಗಿ ಸೃಜಿಸಲಾಗಿರುವ ಹನೂರು ತಾಲ್ಲೂಕಿಗೆ ತಾಲ್ಲೂಕು ಕಛೇರಿ ಕಟ್ಟಡ ನಿರ್ಮಾಣ ಆಗಿರುವುದಿಲ್ಲ. ಆಹಾರ ಶಾಖೆಗೆ ಸ್ಥಳಾವಕಾಶದ ಕೊರತೆ ಇರುವುದರಿಂದ ತಾತ್ಕಾಲಿಕವಾಗಿ ಕೊಳ್ಳೇಗಾಲ ತಾಲ್ಲೂಕಿನ ಆಹಾರ ಶಾಖೆಯಿಂದ ಹನೂರು ತಾಲ್ಲೂಕಿನ ಎಲ್ಲಾ ಕೆಲಸ ಕಾರ್ಯಗಳನ್ನು ನಿರ್ವಹಿಸಲಾಗುತ್ತಿದೆ. ಹನೂರು ತಾಲ್ಲೂಕಿನ ತಹಶೀಲ್ದಾರ ಕಛೇರಿಯಲ್ಲಿ ಆಹಾರ ಶಾಖೆಗೆ ಸ್ಥಳಾವಕಾಶವನ್ನು ಮಾಡಿಕೊಟ್ಟ ನಂತರ ಆಹಾರ ಇಲಾಖೆಯ ಎಲ್ಲಾ ಕೆಲಸ ಕಾರ್ಯಗಳನ್ನು ಹನೂರು ತಾಲ್ಲೂಕು ಕಛೇರಿಯಿಂದಲೇ ನಿರ್ವಹಿಸಲು ಕ್ರಮವಹಿಸಲಾಗುತ್ತದೆ. |
| ಆ | ಬಂದಿದ್ದಲ್ಲಿ, ಹನೂರು ತಾಲ್ಲೂಕು ಕೇಂದ್ರದಲ್ಲಿ ಆಹಾರ ಇಲಾಖೆಯ ತಾಲ್ಲೂಕುಮಟ್ಟ ಕಛೇರಿಯನ್ನು ತೆರೆಯಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು? (ವಿವರ ನೀಡುವುದು) | ಹನೂರು ತಾಲ್ಲೂಕಿನ ತಹಶೀಲ್ದಾರ ಕಛೇರಿಯಲ್ಲಿ ಆಹಾರ ಶಾಖೆಗೆ ಸ್ಥಳಾವಕಾಶವನ್ನು ಮಾಡಿಕೊಟ್ಟ ನಂತರ ಆಹಾರ ಇಲಾಖೆಯ ಎಲ್ಲಾ ಕೆಲಸ ಕಾರ್ಯಗಳನ್ನು ಹನೂರು ತಾಲ್ಲೂಕು ಕಛೇರಿಯಿಂದಲೇ ನಿರ್ವಹಿಸಲು ಕ್ರಮವಹಿಸಲಾಗುತ್ತದೆ. |

ಆನಾಸ 326 ಡಿಆರ್ ಎ 2020 (ಇ-ಆಫೀಸ್)

(ಕೆ.ಗೋಪಾಲಯ್ಯ)
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

ಕರ್ನಾಟಕ ಸರ್ಕಾರ

ಸಂಖ್ಯೆ:ಆನಾಸ 328 ಡಿಆರ್‌ಎ 2020 (ಇ-ಆಫೀಸ್)

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ, ನೆಲಮಹಡಿ
ಬೆಂಗಳೂರು ದಿನಾಂಕ:19.01.2021

ಇವರಿಂದ,

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ
ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆ

ಇವರಿಗೆ,

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಸುಬ್ಬಾರೆಡ್ಡಿ ಎಸ್.ಎನ್ (ಬಾಗೇಪಲ್ಲಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1122 ಗೆ ಉತ್ತರ ನೀಡುವ ಬಗ್ಗೆ.

ಉಲ್ಲೇಖ: ಕಾರ್ಯದರ್ಶಿಯವರ ಪರವಾಗಿ, ಕರ್ನಾಟಕ ವಿಧಾನ ಸಭೆ ಇವರ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/8ಅ/ಪ್ರ.ಸಂ1122/2020, ದಿನಾಂಕ:03.12.2020

******

ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಸುಬ್ಬಾರೆಡ್ಡಿ ಎಸ್.ಎನ್ (ಬಾಗೇಪಲ್ಲಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1122 ಕ್ಕೆ ಉತ್ತರವನ್ನು ಸಿದ್ಧಪಡಿಸಿ, ಅದರ 30 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

(ವಿ.ವೆಂಕಟೇಶ್)
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು, ಗ್ರಾಹಕರ ವ್ಯವಹಾರಗಳ
ಮತ್ತು ಕಾನೂನು ಮಾಪನಶಾಸ್ತ್ರ ಇಲಾಖೆ.

ಪ್ರತಿ:

1. ಮಾನ್ಯ ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನಸೌಧ, ಬೆಂಗಳೂರು.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆಯ ಆಪ್ತ ಕಾರ್ಯದರ್ಶಿ, ವಿಕಾಸಸೌಧ, ಬೆಂಗಳೂರು.
3. ಸರ್ಕಾರದ ಉಪ ಕಾರ್ಯದರ್ಶಿ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆಯ ಆಪ್ತ ಸಹಾಯಕ, ವಿಕಾಸಸೌಧ, ಬೆಂಗಳೂರು.
4. ಸರ್ಕಾರದ ಅಧೀನ ಕಾರ್ಯದರ್ಶಿ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆ, ವಿಕಾಸಸೌಧ, ಬೆಂಗಳೂರು.

20/1/2021

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1122

ವಿಧಾನ ಸಭೆ ಸದಸ್ಯರ ಹೆಸರು : ಶ್ರೀ ಸುಬ್ಬಾರೆಡ್ಡಿ ಎಸ್.ಎನ್. (ಬಾಗೇಪಲ್ಲಿ)

ಉತ್ತರಿಸಬೇಕಾದ ದಿನಾಂಕ : 11.12.2020

ಉತ್ತರಿಸುವ ಸಚಿವರು : ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಪಡಿತರ ಚೀಟಿ, ಆಹಾರ ಧಾನ್ಯ ಪಡೆಯಲು ಬಯೋಮೆಟ್ರಿಕ್ ಹೆಬ್ಬೆಟ್ಟಿನ ಗುರುತನ್ನು ಕಡ್ಡಾಯ ಮಾಡಲಾಗಿದೆಯೇ; | ಹೌದು |
| ಆ | ವಯೋವೃದ್ಧರು, ಕುಷ್ಠರೋಗ ಪೀಡಿತರು, ಅಂಗವಿಕಲರು ಪಡಿತರ ಪಡೆಯುವಾಗ ಬಯೋಮೆಟ್ರಿಕ್ ಗುರುತು ಬಾರದಿರುವುದರಿಂದ ಪಡಿತರ ಪಡೆಯಲು ಕಷ್ಟವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| ಇ | ಬಂದಿದ್ದಲ್ಲಿ, ಪಡಿತರ ವಿತರಣೆ ಸಡಿಲೀಕರಣಗೊಳಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಪಡಿತರ ಚೀಟಿದಾರರು ಪಡಿತರ ಪಡೆಯುವಾಗ ಯಾವುದೇ ತಾಂತ್ರಿಕ ಸಮಸ್ಯೆ ಎದುರಾದಲ್ಲಿ ಬಯೋಮೆಟ್ರಿಕ್ ವಿನಾಯಿತಿ ಮೂಲಕ ಪಡಿತರ ವಿತರಿಸಲು ಸಹ ಅವಕಾಶ ನೀಡಲಾಗಿದೆ. ಪಡಿತರ ಚೀಟಿದಾರರು ಪಡಿತರ ಪಡೆಯಲು ಯಾವುದೇ ಅನಾನುಕೂಲವಾಗದಂತೆ ಕ್ರಮವಹಿಸಲಾಗಿದೆ. |
| ಈ | ಇಂತಹ ವಿಶೇಷ ಪ್ರಕರಣಗಳಲ್ಲಿ ಕಾರ್ಡ್ ನೇರವಾಗಿ ವಿತರಣೆ ಮಾಡಲು ಸರ್ಕಾರ ಸೂಚನೆ ನೀಡಲು ಅಧಿಕಾರಪಡೆಯೇ (ವಿವರ ನೀಡುವುದು) | ವಯೋವೃದ್ಧರು, ಕುಷ್ಠರೋಗ ಪೀಡಿತರು, ಅಂಗವಿಕಲರು ಪಡಿತರ ಪಡೆಯುವಾಗ ಬಯೋಮೆಟ್ರಿಕ್ ಗುರುತು ಬಾರದಿರುವ ಪ್ರಕರಣಗಳಲ್ಲಿ ಅಂತಹವರಿಗೆ ಬಯೋಮೆಟ್ರಿಕ್ ವಿನಾಯಿತಿಯನ್ನು ನೀಡಲಾಗುತ್ತಿದೆ. ಅಂತಹ ಪಡಿತರ ಚೀಟಿದಾರರಿಗೆ ನ್ಯಾಯಬೆಲೆ ಅಂಗಡಿಗಳಲ್ಲಿ ಬಯೋಮೆಟ್ರಿಕ್ ವಿನಾಯಿತಿ ಅಥವಾ ಮೊಬೈಲ್ ಓಟಿಪಿ ಮೂಲಕ ಪಡಿತರ ವಿತರಿಸುವ ಅವಕಾಶ ಕಲ್ಪಿಸಲಾಗಿದೆ. |

ಆನಾಸ 328 ಡಿಆರ್ಎ 2020 (ಇ-ಆಫೀಸ್)

(ಕೆ.ಗೋಪಾಲಯ್ಯ)

ಆಹಾರ, ನಾಗರಿಕ ಸರಬರಾಜು ಮತ್ತು

ಗ್ರಾಹಕರ ವ್ಯವಹಾರಗಳ ಹಾಗೂ

ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.



**ಕರ್ನಾಟಕ ಸರ್ಕಾರ**

ಸಂಖ್ಯೆ: ನಅಇ 165 ಯುಎಂಎಸ್ 2020

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸ ಸೌಧ,
ಬೆಂಗಳೂರು, ದಿನಾಂಕ:21-01-2021

**ಇವರಿಂದ,**

ಸರ್ಕಾರದ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ,
ವಿಕಾಸ ಸೌಧ,
ಬೆಂಗಳೂರು.

**ಇವರಿಗೆ,**

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ,
ಬೆಂಗಳೂರು.

ಮಾನ್ಯರೇ,

**ವಿಷಯ:** ವಿಧಾನ ಸಭೆಯ ಸದಸ್ಯರಾದ ಶ್ರೀ. ಐಹೊಳೆ ಡಿ. ಮಹಾಲಿಂಗಪ್ಪ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 149ಕ್ಕೆ ಉತ್ತರ ನೀಡುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ. ಐಹೊಳೆ ಡಿ. ಮಹಾಲಿಂಗಪ್ಪ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 149ಕ್ಕೆ ಸಂಬಂಧಿಸಿದ ಉತ್ತರದ **25** ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

(ಲತಾ. ಕೆ)
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.
(ಎಂ.ಎ-2 & ಮಂಡಳಿ)

25/1/21

## ಕರ್ನಾಟಕ ವಿಧಾನ ಸಭೆ

| | |
|---|---|
| ಸದಸ್ಯರು ಹೆಸರು | ಶ್ರೀ ಐಹೊಳೆ ಡಿ. ಮಹಾಲಿಂಗಪ್ಪ (ರಾಯಭಾಗ). |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 149 |
| ಉತ್ತರಿಸಬೇಕಾದ ದಿನಾಂಕ | 11-12-2020. |
| ಉತ್ತರಿಸಬೇಕಾದವರು | ನಗರಾಭಿವೃದ್ಧಿ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿ ಜಿಲ್ಲೆಯ, ರಾಯಭಾಗ ಮತಕ್ಷೇತ್ರದ ವ್ಯಾಪ್ತಿಯ ರಾಯಭಾಗ, ಚಿಂಚಲಿ, ಕಂಕಣವಾಡಿ ಮತ್ತು ಕಬ್ಬೂರು ಪಟ್ಟಣಗಳಿಗೆ ನಿರಂತರ ನೀರು ಸರಬರಾಜು (24x7) ಮಾಡುವ ಪ್ರಸ್ತಾವನೆಯು ಸರ್ಕಾರದ ಮುಂದಿದೆಯೇ; | ಬೆಳಗಾವಿ ಜಿಲ್ಲೆಯ ರಾಯಭಾಗ ಮತಕ್ಷೇತ್ರದ ವ್ಯಾಪ್ತಿಯ ಚಿಂಚಲಿ, ಕಂಕಣವಾಡಿ ಮತ್ತು ಕಬ್ಬೂರ ಪಟ್ಟಣಗಳಿಗೆ 24x7 ನಿರಂತರ ನೀರು ಸರಬರಾಜು ಮಾಡುವ ಪ್ರಸ್ತಾವನೆಯು ಸರ್ಕಾರದ ಮುಂದಿರುವುದಿಲ್ಲ.<br><br>ರಾಯಭಾಗ ಪಟ್ಟಣಕ್ಕೆ ದಿಗ್ಗೇವಾಡಿ ಬಳಿ ಕೃಷ್ಣಾ ನದಿಯಿಂದ ನೀರು ಸರಬರಾಜು ಮಾಡಲು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ರೂ.6560.00 ಲಕ್ಷಗಳಿಗೆ ಅಂದಾಜು ಪಟ್ಟಿಯನ್ನು ತಯಾರಿಸಿ ದಿನಾಂಕ 18-05-2020 ರಂದು ಆಡಳಿತಾತ್ಮಕ ಅನುಮೋದನೆಗಾಗಿ ಸರ್ಕಾರಕ್ಕೆ ಸಲ್ಲಿಸಿದ್ದು, ಸದರಿ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿದೆ. |
| ಆ) | ಹಾಗಿದ್ದಲ್ಲಿ, ಈ ಪಟ್ಟಣಗಳಿಗೆ ಕುಡಿಯುವ ನೀರು ಸರಬರಾಜು ಮಾಡುವ ಪ್ರಸ್ತಾವನೆಯು ಪ್ರಸ್ತುತ ಯಾವ ಹಂತದಲ್ಲಿದೆ; ಈ ಪಟ್ಟಣಗಳ ಸಾರ್ವಜನಿಕರಿಗೆ ಮುಂದಿನ ಆಯವ್ಯಯದಲ್ಲಿ ಘೋಷಿಸಿ, ಕ್ರಿಯಾ ಯೋಜನೆಯನ್ನು ಸೇರ್ಪಡಿಸಿ ಕಾಮಗಾರಿಯನ್ನು ಪ್ರಾರಂಭಿಸಲಾಗುವುದೇ; | |
| ಇ) | ಹಾಗಿದ್ದಲ್ಲಿ, ಈ ಯೋಜನೆಗೆ ತಗಲಬಹುದಾದ ಅಂದಾಜು ವೆಚ್ಚವೆಷ್ಟು? (ವಿವರ ನೀಡುವುದು) | |
| ಈ) | ಇಲ್ಲವಾದಲ್ಲಿ, ಈ ಪಟ್ಟಣಗಳ ಸಾರ್ವಜನಿಕರಿಗೆ (24x7) ಕುಡಿಯುವ ನೀರು ಸರಬರಾಜು ಮಾಡಲು ಸರ್ಕಾರಕ್ಕಿರುವ ತೊಂದರೆಗಳೇನು? (ವಿವರ ನೀಡುವುದು) | |

**ನಅಇ 165 ಯುಎಂಎಸ್ 2020**

**(ಬಿ.ಎ.ಬಸವರಾಜ)**
ನಗರಾಭಿವೃದ್ಧಿ ಸಚಿವರು



**ಕರ್ನಾಟಕ ಸರ್ಕಾರ**

ಸಂಖ್ಯೆ: ನಅಇ 185 ಯುಎಂಎಸ್ 2020

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸ ಸೌಧ,
ಬೆಂಗಳೂರು, ದಿನಾಂಕ:21-01-2021

**ಇವರಿಂದ,**

ಸರ್ಕಾರದ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ,
ವಿಕಾಸ ಸೌಧ,
ಬೆಂಗಳೂರು.

**ಇವರಿಗೆ,**

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ,
ಬೆಂಗಳೂರು.

ಮಾನ್ಯರೇ,

**ವಿಷಯ:** ವಿಧಾನ ಸಭೆಯ ಸದಸ್ಯರಾದ ಶ್ರೀ. ಅಮರೇಗೌಡ ಲಿಂಗನಗೌಡ ಪಾಟೀಲ್ ಬಯ್ಯಾಪೂರ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 531ಕ್ಕೆ ಉತ್ತರ ನೀಡುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ. ಅಮರೇಗೌಡ ಲಿಂಗನಗೌಡ ಪಾಟೀಲ್ ಬಯ್ಯಾಪೂರ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 531ಕ್ಕೆ ಸಂಬಂಧಿಸಿದ ಉತ್ತರದ **25** ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

(ಲತಾ. ಕೆ)
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.
(ಎಂ.ಎ-2 & ಮಂಡಳಿ)

25/1/21

**ಕರ್ನಾಟಕ ವಿಧಾನ ಸಭೆ**

| | |
|---|---|
| ಸದಸ್ಯರ ಹೆಸರು | ಶ್ರೀ ಅಮರೇಗೌಡ ಲಿಂಗನಗೌಡ ಪಾಟೀಲ್ ಬಯ್ಯಾಪುರ್ (ಕುಷ್ಟಗಿ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 531 |
| ಉತ್ತರಿಸಬೇಕಾದ ದಿನಾಂಕ | 11.12.2020 |
| ಉತ್ತರಿಸಬೇಕಾದವರು | ನಗರಾಭಿವೃದ್ಧಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೊಪ್ಪಳ ಜಿಲ್ಲೆ, ಕುಷ್ಟಗಿ ಪಟ್ಟಣಕ್ಕೆ 24x7 ನಿರಂತರ ಕುಡಿಯುವ ನೀರಿನ ವ್ಯವಸ್ಥೆಯನ್ನು ಕಲ್ಪಿಸಲು ಯೋಜನೆಯನ್ನು ರೂಪಿಸಲಾಗಿದೆಯೇ; | ಯು.ಐ.ಡಿ.ಎಸ್.ಎಸ್.ಎಂ.ಟಿ. ಯೋಜನೆಯಡಿ ರೂ.5821.20 ಲಕ್ಷಗಳ ವೆಚ್ಚದಲ್ಲಿ ಹುನಗುಂದ, ಇಳಕಲ್ ಮತ್ತು ಕುಷ್ಟಗಿ ಪಟ್ಟಣಗಳ ಸಮಗ್ರ ಕುಡಿಯುವ ನೀರು ಸರಬರಾಜು ಯೋಜನೆಯಲ್ಲಿ ಕುಷ್ಟಗಿ ಪಟ್ಟಣದ 3 ವಲಯಗಳಲ್ಲಿನ ವಲಯ-2, ಪಾರ್ಟ್-1 ರಲ್ಲಿ 24x7 ಮಾದರಿಯ ನೀರಿನ ವ್ಯವಸ್ಥೆಯನ್ನು ಕಲ್ಪಿಸಲು ರೂ.420.13 ಲಕ್ಷಗಳಲ್ಲಿ ಕಾಮಗಾರಿ ಕೈಗೊಂಡು 23.22 ಕಿ.ಮೀ. ಉದ್ದದ ವಿತರಣಾ ಕೊಳವೆ ಮಾರ್ಗ ಮತ್ತು 2266 ಮನೆಗಳಿಗೆ ನೀರಿನ ಸಂಪರ್ಕ ಕಲ್ಪಿಸಿ ದಿನಾಂಕ 30-03-2018 ರಂದು ಚಾಲನೆಗೊಳಿಸಿದೆ.<br><br>ಕುಷ್ಟಗಿ ಪಟ್ಟಣದ ಕುಡಿಯುವ ನೀರಿನ ವ್ಯವಸ್ಥೆಯನ್ನು ಸುಧಾರಣೆ ಮಾಡಲು ನಗರೋತ್ಥಾನ-3 ನೇ ಹಂತದಡಿ ರೂ.514.03 ಲಕ್ಷಗಳ ಅನುದಾನದಲ್ಲಿ ಹುನಗುಂದ ಬಳಿ ಜಲಶುದ್ಧೀಕರಣ ಘಟಕದಲ್ಲಿ 260 ಅಶ್ವಶಕ್ತಿಯ ಪಂಪುಗಳು (ಶೇ 100 ರಷ್ಟು ಸ್ಟ್ಯಾಂಡ್ ಬಾಯ್), ಇಳಕಲ ಬಳಿಯ ದರ್ಗಾ ಪಂಪಹೌಸನಲ್ಲಿ 240 ಅಶ್ವಶಕ್ತಿಯ ಪಂಪುಗಳು (ಶೇ 100 ರಷ್ಟು ಸ್ಟ್ಯಾಂಡ್ ಬಾಯ್) ಹಾಗೂ ಕುಷ್ಟಗಿ ಬಳಿ ಇರುವ ಯಂತ್ರಾಗಾರದಲ್ಲಿ 150 ಅಶ್ವಶಕ್ತಿಯ ಯಂತ್ರಗಳನ್ನು (ಶೇ 100 ರಷ್ಟು ಸ್ಟ್ಯಾಂಡ್ ಬಾಯ್) ಅಳವಡಿಸಿ, ದಿನಂಪ್ರತಿ ತಲಾ 135 ಲೀಟರ್ ಸರಬರಾಜು ಮಾಡಲು ಕಾಮಗಾರಿಯನ್ನು ಪೂರ್ಣಗೊಳಿಸಿ ದಿನಾಂಕ 01-07-2019 ರಂದು ಚಾಲನೆಗೊಳಿಸಲಾಗಿದೆ.<br><br>ಪಟ್ಟಣದ ಬಾಕಿ ಪ್ರದೇಶಗಳಲ್ಲಿ 24x7 ಮಾದರಿಯ ನೀರು ಸರಬರಾಜು ವ್ಯವಸ್ಥೆಯನ್ನು ಇನ್ನಿತರ ಅಗತ್ಯ ಕಾಮಗಾರಿಗಳೊಂದಿಗೆ ಕೈಗೊಳ್ಳಲು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ರೂ.4380.00 ಲಕ್ಷಗಳಿಗೆ ಅಂದಾಜು ಪಟ್ಟಿಯನ್ನು ದಿನಾಂಕ 13-06-2019 ರಂದು ಆಡಳಿತಾತ್ಮಕ ಅನುಮೋದನೆಗಾಗಿ ಸರ್ಕಾರಕ್ಕೆ ಸಲ್ಲಿಸಿದ್ದು, ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಲವೊಂದು ಹೆಚ್ಚುವರಿ ಮಾಹಿತಿಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯಿಂದ ಕೋರಲಾಗಿದೆ. ಸದರಿ ಮಾಹಿತಿಯು ಸ್ವೀಕೃತವಾದ ನಂತರ ಆಡಳಿತಾತ್ಮಕ ಅನುಮೋದನೆ ನೀಡಲು ನಿಯಮಾನುಸಾರ ಕ್ರಮವಹಿಸಲಾಗುವುದು. |
| ಆ) | ಹಾಗಿದ್ದಲ್ಲಿ, ಈ ಯೋಜನೆಯು ಪ್ರಸ್ತುತ ಯಾವ ಹಂತದಲ್ಲಿದೆ; ಹಾಗೂ ಕುಡಿಯುವ ನೀರಿನ ವ್ಯವಸ್ಥೆಯನ್ನು ಸುಧಾರಣೆ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | |
| ಇ) | ಸದರಿ ಯೋಜನೆಯನ್ನು ಜಾರಿಗೊಳಿಸಲು ತಾಂತ್ರಿಕ ಸಮಸ್ಯೆಗಳಿವೆಯೇ; ಹಾಗಿದ್ದಲ್ಲಿ, ಅವುಗಳನ್ನು ಸರಿಪಡಿಸಲು ಕೈಗೊಂಡಿರುವ ಕ್ರಮಗಳೇನು: (ವಿವರ ನೀಡುವುದು) | |
| ಈ) | ಸದರಿ ಯೋಜನೆಯನ್ನು ಕಾರ್ಯಗತಗೊಳಿಸಲು ತಗಲುವ ಒಟ್ಟಾರೆ ವೆಚ್ಚವೆಷ್ಟು; ಹಾಗೂ ಹಾಲಿ ಇಲ್ಲಿವರೆಗೆ ಖರ್ಚಾಗಿರುವ ಮೊತ್ತವೆಷ್ಟು? (ವಿವರ ನೀಡುವುದು) | |

**ಸಂಖ್ಯೆ ನಅಇ 185 ಯುಎಂಎಸ್ 2020**

**(ಬಿ.ಎ.ಬಸವರಾಜ)**
ನಗರಾಭಿವೃದ್ಧಿ ಸಚಿವರು

| | | | | | | |
|---|---|---|---|---|---|---|
| 24 | ಜಿ ಜಿ. ಬ್ರದರ್ಸ್ | 2522 | ಬಳ್ಳಾರಿ | 178507 | 182243 | 160000 |
| 25 | ಹೆಚ್ ಆರ್ ಗವಿಯಪ್ಪ & ಕೋ., | 2483 | ಬಳ್ಳಾರಿ | 130448 | 139298 | 104828 |
| 26 | ಹೆಚ್. ಎನ್ ಪ್ರೇಮ್ ಕುಮಾರ್ | 2538 | ಬಳ್ಳಾರಿ | 102733 | 153210 | 117824 |
| 27 | ಜಿ ಜಿ. ಬ್ರದರ್ಸ್ | 2586 | ಬಳ್ಳಾರಿ | 74059 | 59441 | 36000 |
| 28 | ಹೆಚ್ ಜಿ ರಂಗನಗೌಡ | 2549 | ಬಳ್ಳಾರಿ | 143052 | 140052 | 137661 |
| 29 | ಕುಮಾರ ಸ್ವಾಮಿ ಮಿನರಲ್ ಎಕ್ಸ್ ಪೋರ್ಟ್ಸ್ | 2141 | ಬಳ್ಳಾರಿ | 536216 | 2212430 | 1540000 |
| 30 | ಜೆಎಸ್ ಡಬ್ಲ್ಯೂ ಸ್ಟೀಲ್ ಲಿಮಿಟೆಡ್- ತುಂಗ ಐರನ್ ಓರ್ ಮೈನ್ಸ್ | 0004 | ಬಳ್ಳಾರಿ | 46771 | 527205 | 299997 |
| 31 | ಜೆಎಸ್ ಡಬ್ಲ್ಯೂ ಸ್ಟೀಲ್ ಲಿಮಿಟೆಡ್- ನಂದಿ ಐರನ್ ಓರ್ ಮೈನ್ಸ್ | 0005 | ಬಳ್ಳಾರಿ | - | 407999 | 407801 |
| 32 | ಜೆಎಸ್ ಡಬ್ಲ್ಯೂ ಸ್ಟೀಲ್ ಲಿಮಿಟೆಡ್- (ದೇವದಾರಿ ಐರನ್ ಮೈನ್ಸ್ ) | 0006 | ಬಳ್ಳಾರಿ | - | 529038 | 1799540 |
| 33 | ಜೆಎಸ್ ಡಬ್ಲ್ಯೂ ಸ್ಟೀಲ್ ಲಿಮಿಟೆಡ್- (ಭದ್ರಾ ಐರನ್ ಮೈನ್ಸ್) | 0007 | ಬಳ್ಳಾರಿ | - | - | 1249750 |
| 34 | ಜೆಎಸ್ ಡಬ್ಲ್ಯೂ ಸ್ಟೀಲ್ ಲಿಮಿಟೆಡ್- (ರಾಮ ಐರನ್ ಮೈನ್ಸ್) | 0008 | ಬಳ್ಳಾರಿ | - | - | 340728 |
| 35 | ಜೆಎಸ್ ಡಬ್ಲ್ಯೂ ಸ್ಟೀಲ್ ಲಿಮಿಟೆಡ್- (ಉಬ್ಬಳಗುಂಡಿ ಐರನ್ ಮೈನ್ಸ್) | 0009 | ಬಳ್ಳಾರಿ | - | - | 71624 |
| 36 | ಎಂಎಸ್ ಪಿಎಲ್ (ಎಲ್ ಎಂಸಿ) | 0010 | ಬಳ್ಳಾರಿ | - | - | 200000 |
| 37 | ಜೆಎಸ್ ಡಬ್ಲ್ಯೂ ಸ್ಟೀಲ್ ಲಿಮಿಟೆಡ್- (ನಾರಾಯಣ ಮೈನ್ಸ್) | 0012 | ಬಳ್ಳಾರಿ | - | - | - |
| 38 | ಜೆಎಸ್ ಡಬ್ಲ್ಯೂ ಸ್ಟೀಲ್ ಲಿಮಿಟೆಡ್- (ZTC) | 0013 | ಬಳ್ಳಾರಿ | - | - | - |

| | | | | | | |
|---|---|---|---|---|---|---|
| 39 | ಬಾಲಾಜಿ ಮೈನ್ಸ್ & ಮಿನರಲ್ಸ್ ಪ್ರೈ. ಲಿಮಿಟೆಡ್ | 2564 | ಬಳ್ಳಾರಿ | - | - | - |
| 40 | ಜೀನತ್ ಟ್ರಾನ್ಸ್ ಪೋರ್ಟ್ ಕೋ., | 2309 | ಬಳ್ಳಾರಿ | - | - | - |
| 41 | ಲಕ್ಷ್ಮಿ ಮಿನರಲ್ಸ್ | 2545 | ಬಳ್ಳಾರಿ | - | - | - |
| 42 | ಎಸ್ ಎ ತವಾಬ್ & ಕೋ., | 2488 | ಬಳ್ಳಾರಿ | - | 9100 | 35000 |
| 43 | ಸೇಸಾ ಗೋವಾ | 2677 | ಚಿತ್ರದುರ್ಗ | 2216701 | 2748981 | 6202750 |
| 44 | ಮಿನರಲ್ ಎಂಟರ್ ಪ್ರೈಸಸ್ ಲಿ., | 2346 | ಚಿತ್ರದುರ್ಗ | 645120 | 699843 | 532833 |
| 45 | ಆರ್ ಪ್ರವೀಣ್ ಚಂದ್ರ | 2292 | ಚಿತ್ರದುರ್ಗ | 765510 | 387670 | 988124 |
| | | | ಒಟ್ಟು | 25223374 | 28857750 | 30459890 |
| | | | ಒಟ್ಟು ಮಿಲಿಯನ್ ಟನ್ ಗಳಲ್ಲಿ | 25.22 | 28.85 | 30.45 |

for ನಿರ್ದೇಶಕರು 10:12:2020

## ಅನುಬಂಧ – 3

ಕಬ್ಬಿಣದ ಅದಿರಿನಿಂದ ಸಂಗ್ರಹವಾದ ರಾಜಧನದ ಜಿಲ್ಲಾವಾರು ವಿವರ (ಕೋಟಿ.ರೂ.ಗಳಲ್ಲಿ)

| ಜಿಲ್ಲೆ | 2017-18 | 2018-19 | 2019-20 |
|---|---|---|---|
| ಬಳ್ಳಾರಿ | 917.80 | 927.67 | 977.88 |
| ಬಾಗಲಕೋಟೆ | 7.52 | 5.12 | 9.68 |
| ತುಮಕೂರು | - | - | - |
| ಚಿತ್ರದುರ್ಗ | 89.24 | 101.88 | 211.82 |
| ಒಟ್ಟು | 1014.57 | 1034.68 | 1199.38 |

for 10.12.2020
ನಿರ್ದೇಶಕರು



**ಕರ್ನಾಟಕ ಸರ್ಕಾರ**

ಸಂಖ್ಯೆ: ಸಿಒ 399 ಸಿಎಲ್‌ಎಸ್ 2020

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿನಾಂಕ: 10.12.2020

**ಇಂದ:**

ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಸಹಕಾರ ಇಲಾಖೆ,
ಬೆಂಗಳೂರು-560001.

U/S 11/12/2020

**ಇವರಿಗೆ:**

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭಾ ಸಚಿವಾಲಯ,
ವಿಧಾನಸೌಧ,
ಬೆಂಗಳೂರು.

**ಮಾನ್ಯರೆ,**

**ವಿಷಯ** : ಕರ್ನಾಟಕ ವಿಧಾನ ಸಭೆಯ ಸದಸ್ಯರಾದ ಶ್ರೀ ರೇವಣ್ಣ ಹೆಚ್.ಡಿ., ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 993 ಕ್ಕೆ ಉತ್ತರ ಒದಗಿಸುವ ಕುರಿತು.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭೆಯ ಸದಸ್ಯರಾದ ಶ್ರೀ ರೇವಣ್ಣ ಹೆಚ್.ಡಿ., ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 993 ಕ್ಕೆ ಉತ್ತರದ 25 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲಾಗಿದೆ.

ತಮ್ಮ ನಂಬುಗೆಯ,

Radha H C
**(ರಾಧ ಹೆಚ್.ಸಿ.)**
ಸರ್ಕಾರದ ಅಧೀನ ಕಾರ್ಯದರ್ಶಿ-3 (ಪ್ರ),
ಸಹಕಾರ ಇಲಾಖೆ.

ಕರ್ನಾಟಕ ವಿಧಾನ ಸಭೆ

ಮಾನ್ಯ ವಿಧಾನ ಸಭೆ ಸದಸ್ಯರು : ಶ್ರೀ ರೇವಣ್ಣ ಹೆಚ್.ಡಿ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 993

ಉತ್ತರಿಸಬೇಕಾದ ದಿನಾಂಕ : 11.12.2020

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಈ ಹಿಂದಿನ ಸರ್ಕಾರದ ಅವಧಿಯಲ್ಲಿ ಸಹಕಾರ ಬ್ಯಾಂಕುಗಳಲ್ಲಿ ಹಾಗೂ ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ಬೆಳೆ ಸಾಲ ಮನ್ನಾ ಸೌಲಭ್ಯ ಪಡೆದ ರೈತರ ಸಂಖ್ಯೆ ಹಾಗೂ ಹಣವೆಷ್ಟು; (ಜಿಲ್ಲಾವಾರು ಮಾಹಿತಿ ನೀಡುವುದು) | **ಸಹಕಾರ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>ಸಹಕಾರ ಸಂಘಗಳಲ್ಲಿ 2018-19 ನೇ ಸಾಲಿನ ರೂ.1.00 ಲಕ್ಷಗಳ ಸಾಲ ಮನ್ನಾ ಯೋಜನೆಯಡಿಯಲ್ಲಿ 17,06,049 ರೈತರು ರೂ.7987.47 ಕೋಟಿಗಳ ಸಾಲ ಮನ್ನಾ ಸೌಲಭ್ಯ ಪಡೆದಿರುತ್ತಾರೆ. ಜಿಲ್ಲಾವಾರು ವಿವರವನ್ನು **ಅನುಬಂಧ-01** ರಲ್ಲಿ ನೀಡಲಾಗಿದೆ.<br>**ವಾಣಿಜ್ಯ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>2018-19 ನೇ ಆಯವ್ಯಯದಲ್ಲಿ ರಾಜ್ಯದ ರೈತರಿಗೆ ಬೆಳೆ ಸಾಲ ಮನ್ನಾ ಮಾಡಲು ರೂಪಿಸಿದ ಯೋಜನೆಯಲ್ಲಿ ಷೆಡ್ಯೂಲ್ ಕಮರ್ಶಿಯಲ್ ಮತ್ತು ಗ್ರಾಮೀಣ ಬ್ಯಾಂಕುಗಳಲ್ಲಿ ಬೆಳೆ ಸಾಲ ಮನ್ನಾ ಸೌಲಭ್ಯ ಪಡೆದ ರೈತರ ಸಂಖ್ಯೆ: 957857 ಹಾಗೂ ಮೊತ್ತ ರೂ.7158.81 ಕೋಟಿಗಳಾಗಿದೆ. ಜಿಲ್ಲಾವಾರು ವಿವರವನ್ನು **ಅನುಬಂಧ-02** ರಲ್ಲಿ ನೀಡಲಾಗಿದೆ |
| ಆ) | ಈ ಪೈಕಿ ಸರ್ಕಾರದಿಂದ ಜಿಲ್ಲಾ ಬ್ಯಾಂಕುಗಳು/ರಾಷ್ಟ್ರೀಕೃತ ಬ್ಯಾಂಕುಗಳಿಗೆ ಎಷ್ಟು ಜನ ರೈತರಿಗೆ ಮತ್ತು ಎಷ್ಟು ಮೊತ್ತದ ಹಣ ಬಿಡುಗಡೆ ಮಾಡಲಾಗಿದೆ: (ಜಿಲ್ಲಾವಾರು ಮಾಹಿತಿ ನೀಡುವುದು) | **ಸಹಕಾರ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>ಈ ಪೈಕಿ ಸಹಕಾರ ಬ್ಯಾಂಕುಗಳಿಗೆ 16,48,820 ರೈತರಿಗೆ ಸಂಬಂಧಿಸಿದಂತೆ ರೂ.7692.33 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. ಜಿಲ್ಲಾವಾರು ವಿವರವನ್ನು **ಅನುಬಂಧ-01** ರಲ್ಲಿ ನೀಡಲಾಗಿದೆ.<br>**ವಾಣಿಜ್ಯ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>ಈ ಪೈಕಿ ಷೆಡ್ಯೂಲ್ ಕಮರ್ಶಿಯಲ್ ಮತ್ತು ಗ್ರಾಮೀಣ ಬ್ಯಾಂಕುಗಳಿಗೆ ಸಂಬಂಧಿಸಿದಂತೆ 9,57,857 ರೈತರಿಗೆ ಸಂಬಂಧಿಸಿದಂತೆ ರೂ.7158.81 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. ಜಿಲ್ಲಾವಾರು ವಿವರವನ್ನು **ಅನುಬಂಧ-02** ರಲ್ಲಿ ನೀಡಲಾಗಿದೆ. |
| ಇ) | ಎಷ್ಟು ಜನ ರೈತರಿಗೆ, ಎಷ್ಟು ಸಾಲ ಮನ್ನಾ ಹಣವನ್ನು ಇನ್ನೂ ಜಿಲ್ಲಾ ಬ್ಯಾಂಕುಗಳು/ರಾಷ್ಟ್ರೀಕೃತ ಬ್ಯಾಂಕುಗಳಿಗೆ ಬಿಡುಗಡೆ ಮಾಡಲು ಬಾಕಿ ಇದೆ: ಇದುವರೆಗೆ ಹಣ ಬಿಡುಗಡೆ ಮಾಡದಿರಲು ಕಾರಣಗಳೇನು: (ಜಿಲ್ಲಾವಾರು ಮಾಹಿತಿ ನೀಡುವುದು) | **ಸಹಕಾರ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>57,229 ರೈತರ ರೂ.295.14 ಕೊಟಿಗಳ ಸಾಲ ಮನ್ನಾ ಮೊತ್ತವನ್ನು ಸಹಕಾರ ಬ್ಯಾಂಕುಗಳಿಗೆ ಬಿಡುಗಡೆ ಮಾಡಲು ಬಾಕಿ ಇರುತ್ತದೆ. ಜಿಲ್ಲಾವಾರು ವಿವರವನ್ನು **ಅನುಬಂಧ-01** ರಲ್ಲಿ ನೀಡಲಾಗಿದೆ.<br>ರೈತರು ಸಾಲ ಮನ್ನಾ ಘೋಷಣೆಯಾದ ನಂತರ ಹೊಸದಾಗಿ ಪಡಿತರ ಚೀಟಿ ಪಡೆದಿದ್ದು, ಈ ರೈತರ ಕುಟುಂಬದ ಸದಸ್ಯರನ್ನು ತಾಲ್ಲೂಕು ಸಮಿತಿಯಲ್ಲಿ ಗುರುತಿಸಿ ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂ ದಾಖಲೆಗಳ ಇಲಾಖೆಯಿಂದ ದಿ:02-11-2020 ರಂದು ರೈತರ ಪಟ್ಟಿ ನೀಡಿರುವುದರಿಂದ ಹಣ ಬಿಡುಗಡೆ ಮಾಡಲು ತಡವಾಗಿರುತ್ತದೆ.<br>**ವಾಣಿಜ್ಯ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>ಉಳಿದ ರೈತರು ತಮ್ಮ ಆಧಾರ್ ಕಾರ್ಡ್, ರೇಷನ್ ಕಾರ್ಡ್ ಹಾಗೂ ಸರ್ವೆ ನಂಬರ್‌ಗಳನ್ನು ಸಲ್ಲಿಸಿದ ನಂತರ ಪರಿಶೀಲಿಸಿ, ಸಾಲ ಮನ್ನಾ ಪಾವತಿಸಲಾಗುವುದು. |

| | | |
|---|---|---|
| ಈ) | ಬಾಕಿ ಇರುವ ಸಾಲದ ಮೊತ್ತವನ್ನು ರೈತರಿಗೆ ಬಿಡುಗಡೆ ಮಾಡಲು ಯಾವ ಕ್ರಮವನ್ನು ಸರ್ಕಾರದಿಂದ ಕೈಗೊಳ್ಳಲಾಗಿದೆ? (ಸಂಪೂರ್ಣ ಮಾಹಿತಿ ನೀಡುವುದು) | **ಸಹಕಾರ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>2020-21 ನೇ ಸಾಲಿನಲ್ಲಿ ಸಾಲ ಮನ್ನಾ ಯೋಜನೆಗೆ ರೂ.361.00 ಕೋಟಿಗಳ ಆಯವ್ಯಯ ಅವಕಾಶ ಕಲ್ಪಿಸಲಾಗಿದೆ. ಸದ್ಯ ಅರ್ಹವಿರುವ ರೈತರಿಗೆ ರೂ.295.14 ಕೋಟಿಗಳನ್ನು ಬಿಡುಗಡೆ ಮಾಡಲು ಪರಿಶೀಲಿಸಲಾಗುತ್ತಿದೆ.<br>**ವಾಣಿಜ್ಯ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>ಉಳಿದ ರೈತರು ತಮ್ಮ ಆಧಾರ್ ಕಾರ್ಡ್, ರೇಷನ್ ಕಾರ್ಡ್ ಹಾಗೂ ಸರ್ವೆ ನಂಬರ್‌ಗಳನ್ನು ಸಲ್ಲಿಸಿದ ನಂತರ ಪರಿಶೀಲಿಸಿ, ಸಾಲ ಮನ್ನಾ ಪಾವತಿಸಲಾಗುವುದು. |

ಸಂಖ್ಯೆ: ಸಿಒ 399 ಸಿಎಲ್‌ಎಸ್ 2020

(ಎಸ್.ಟಿ ಸೋಮಶೇಖರ್)
ಸಹಕಾರ ಸಚಿವರು

ವಿಧಾನ ಸಭೆಯ ಸದಸ್ಯರಾದ ಮಾನ್ಯ ಶ್ರೀ ರೇವಣ್ಣ ಹೆಚ್.ಡಿ (ಹೊಳೇನರಸೀಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ ೯೯೩ ಕ್ಕೆ ಅನುಬಂಧ- 1

ಸಹಕಾರ ಸಂಘಗಳ ಸಾಲ ಮನ್ನಾ ಯೋಜನೆಯಲ್ಲಿ ಅನುದಾನ ಬಿಡುಗಡೆ ಮಾಡಿರುವ ವಿವರ

(ರೂ.ಕೋಟಿಗಳಲ್ಲಿ)

| ಕ್ರ. ಸಂ | ಜಿಲ್ಲೆಯ ಹೆಸರು | ಸಾಲ ಮನ್ನಾ ಸೌಲಭ್ಯ ಪಡೆದ ರೈತರ ವಿವರ | | ಅನುದಾನ ಬಿಡುಗಡೆ ಮಾಡಿದ ರೈತರ ವಿವರ | | ಅನುದಾನ ಬಿಡುಗಡೆ ಮಾಡಲು ಬಾಕಿ ಇರುವ ರೈತರ ವಿವರ | |
|---|---|---|---|---|---|---|---|
| | | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ |
| 1 | ಬಾಗಲಕೋಟೆ | 129856 | 695.21 | 121029 | 644.27 | 8827 | 50.94 |
| 2 | ಬೆಂಗಳೂರು ಗ್ರಾ. | 16830 | 79.02 | 16337 | 76.56 | 493 | 2.46 |
| 3 | ಬೆಂಗಳೂರು ನಗರ | 7695 | 39.29 | 7257 | 36.94 | 438 | 2.36 |
| 4 | ಬೆಳಗಾವಿ | 265690 | 1050.08 | 260330 | 1022.09 | 5360 | 27.99 |
| 5 | ಬಳ್ಳಾರಿ | 62797 | 365.30 | 61043 | 353.02 | 1754 | 12.28 |
| 6 | ಬೀದರ್ | 101882 | 422.31 | 97808 | 402.25 | 4074 | 20.06 |
| 7 | ವಿಜಯಪುರ | 148831 | 611.82 | 138858 | 567.30 | 9973 | 44.52 |
| 8 | ಚಾಮರಾಜನಗರ | 16421 | 100.54 | 16089 | 98.33 | 332 | 2.20 |
| 9 | ಚಿಕ್ಕಬಳ್ಳಾಪುರ | 11113 | 86.74 | 11065 | 86.31 | 48 | 0.42 |
| 10 | ಚಿಕ್ಕಮಗಳೂರು | 26192 | 171.63 | 25541 | 166.83 | 651 | 4.80 |
| 11 | ಚಿತ್ರದುರ್ಗ | 34909 | 159.49 | 33742 | 152.38 | 1167 | 7.11 |
| 12 | ದಕ್ಷಿಣ ಕನ್ನಡ | 58380 | 432.81 | 58065 | 430.20 | 315 | 2.61 |
| 13 | ದಾವಣಗೆರೆ | 60457 | 206.34 | 57509 | 194.70 | 2948 | 11.64 |
| 14 | ಧಾರವಾಡ | 13743 | 56.98 | 13156 | 54.13 | 587 | 2.85 |
| 15 | ಗದಗ | 16055 | 62.29 | 15649 | 60.54 | 406 | 1.76 |
| 16 | ಕಲಬುರಗಿ | 41043 | 112.46 | 39266 | 108.10 | 1777 | 4.35 |
| 17 | ಹಾಸನ | 114019 | 470.16 | 111710 | 458.94 | 2309 | 11.22 |
| 18 | ಹಾವೇರಿ | 20852 | 67.33 | 20502 | 66.04 | 350 | 1.29 |
| 19 | ಕೊಡಗು | 27995 | 218.23 | 26416 | 204.95 | 1579 | 13.28 |
| 20 | ಕೋಲಾರ | 9783 | 87.45 | 9691 | 86.62 | 92 | 0.83 |
| 21 | ಕೊಪ್ಪಳ | 22313 | 93.25 | 21869 | 90.76 | 444 | 2.49 |
| 22 | ಮಂಡ್ಯ | 105945 | 492.95 | 103113 | 478.28 | 2832 | 14.67 |
| 23 | ಮೈಸೂರು | 49430 | 326.33 | 48537 | 319.75 | 893 | 6.58 |
| 24 | ರಾಯಚೂರು | 47600 | 223.32 | 45783 | 213.02 | 1817 | 10.30 |
| 25 | ರಾಮನಗರ | 36358 | 167.12 | 35328 | 162.08 | 1030 | 5.05 |
| 26 | ಶಿವಮೊಗ್ಗ | 31416 | 127.59 | 30809 | 124.48 | 607 | 3.11 |
| 27 | ತುಮಕೂರು | 116401 | 411.98 | 112186 | 393.94 | 4215 | 18.03 |
| 28 | ಉಡುಪಿ | 21149 | 145.44 | 21050 | 144.66 | 99 | 0.78 |
| 29 | ಉತ್ತರ ಕನ್ನಡ | 79146 | 477.44 | 78089 | 470.28 | 1057 | 7.16 |
| 30 | ಯಾದಗಿರಿ | 11748 | 26.59 | 10993 | 24.58 | 755 | 2.00 |
| | ಒಟ್ಟು | **1706049** | **7987.47** | **1648820** | **7692.33** | **57229** | **295.14** |

ಸಹಕಾರ ಸಂಘಗಳ ಅಪರ ನಿಬಂಧಕರು.

(ಪತ್ತು)

## ANNEXURE -೨

| Sl No | BNK_BHM_DC_NME | No Of Loans Waiver Released | Amt Of Waiver Released |
|---|---|---|---|
| 1 | BAGALKOTE | 7319 | 509744442.9 |
| 2 | BALLARY | 48034 | 3961334289 |
| 3 | BANGALORE RURAL | 5689 | 504359771.5 |
| 4 | BANGALORE URBAN | 919 | 67707853.62 |
| 5 | BELAGAVI | 46679 | 3403492169 |
| 6 | Bidar | 16261 | 1266437723 |
| 7 | BIJAPUR | 23607 | 1975223219 |
| 8 | CHAMARAJANAGAR | 17212 | 1654967680 |
| 9 | CHIKKABALLAPURA | 18639 | 1874502349 |
| 10 | CHIKMAGALUR | 27319 | 2044191198 |
| 11 | Chitradurga | 47880 | 3674476901 |
| 12 | DAKSHINA KANNADA | 2915 | 154580169 |
| 13 | DAVANAGERE | 40547 | 2975261829 |
| 14 | DHARWAD | 48770 | 3779871577 |
| 15 | GADAG | 49405 | 3817901469 |
| 16 | Gulbarga | 103515 | 6446730446 |
| 17 | HASSAN | 44383 | 3511122100 |
| 18 | HAVERI | 75828 | 5376519841 |
| 19 | KODAGU | 4487 | 304014214.3 |
| 20 | KOLAR | 19375 | 1981826463 |
| 21 | KOPPAL | 42183 | 2985849670 |
| 22 | MANDYA | 19021 | 1448879600 |
| 23 | MYSORE | 42671 | 3206916177 |
| 24 | RAICHUR | 66152 | 4866225503 |
| 25 | Ramanagara | 4187 | 393417575.7 |
| 26 | SHIMOGA | 33798 | 2063280559 |
| 27 | TUMKUR | 45227 | 3984101961 |
| 28 | UDUPI | 2423 | 111935316.5 |
| 29 | Uttara Kannada | 1498 | 58695306.97 |
| 30 | Yadgir | 51914 | 3184570867 |
| **Grand Total** | | **957857** | **71588138241** |

ವಿಶೇಷ ನೋಡಲ್ ಅಧಿಕಾರಿ

ಬೆಳೆ ಸಾಲ ಮನ್ನಾ ಯೋಜನೆ-2018

ಹಾಗೂ ಸರ್ಕಾರದ ಕಾರ್ಯದರ್ಶಿ (ಸಿ.ಆ.ಸು.ಇ) (ಎ&ಆರ್)

ಕರ್ನಾಟಕ ಸರ್ಕಾರ

ಸಂಖ್ಯೆ: ಸಾಉಇ 14 ಎಲ್‌ಎ ಸಿ 2020

ಕರ್ನಾಟಕ ಸರ್ಕಾರದ ಸಚಿವಾಲಯ,
2ನೇ ಹಂತ, 7ನೇ ಮಹಡಿ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ: 10.12.2020.

U.S

11/12/2020

ಇಂದ :
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಸಾರ್ವಜನಿಕ ಉದ್ದಿಮೆಗಳ ಇಲಾಖೆ.

ಇವರಿಗೆ:
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ,
ಬೆಂಗಳೂರು-560 001.

ಮಾನ್ಯರೇ,

ವಿಷಯ:- ವಿಧಾನ ಸಭೆಯ ಸದಸ್ಯರಾದ ಮಾನ್ಯ ಶ್ರೀ ಹ್ಯಾರಿಸ್ ಎನ್.ಎ (ಶಾಂತಿನಗರ) ಅವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1016 ಕ್ಕೆ ಉತ್ತರ ನೀಡುವ ಬಗ್ಗೆ.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಮಾನ್ಯ ಶ್ರೀ ಹ್ಯಾರಿಸ್ ಎನ್.ಎ (ಶಾಂತಿನಗರ) ಇವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1016 ಕ್ಕೆ ಸಂಬಂಧಿಸಿದ ಉತ್ತರದ 100 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

M. Gopalakrishna

(ಎಂ. ಗೋಪಾಲಕೃಷ್ಣ)
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ)
ಸಾರ್ವಜನಿಕ ಉದ್ದಿಮೆಗಳ ಇಲಾಖೆ

19/12

ಕರ್ನಾಟಕ ಸರ್ಕಾರ

ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1016

ಸದಸ್ಯರ ಹೆಸರು : ಶ್ರೀ ಹ್ಯಾರಿಸ್ ಎನ್.ಎ.(ಶಾಂತಿನಗರ)

ಉತ್ತರಿಸಬೇಕಾದ ದಿನಾಂಕ : 11-12-2020

| ಕ್ರ.ಸಂ. | ಪ್ರಶ್ನೆಗಳು | ಉತ್ತರ |
|---|---|---|
| ಅ | ರಾಜ್ಯದಲ್ಲಿ ಕಾರ್ಯನಿರತವಾಗಿರುವ ಸಾರ್ವಜನಿಕ ಉದ್ದಿಮೆಗಳು ಮತ್ತು ಅವುಗಳ ಸ್ಥಿತಿಗತಿಗಳ ಕುರಿತ ವಿವರಗಳೇನು; | ಕರ್ನಾಟಕ ರಾಜ್ಯದಲ್ಲಿ ಸಾರ್ವಜನಿಕ ಉದ್ದಿಮೆಗಳ ಇಲಾಖೆಯ ವ್ಯಾಪ್ತಿಯಲ್ಲಿ ಒಟ್ಟು 60 ಸಾರ್ವಜನಿಕ ಉದ್ದಿಮೆಗಳಿವೆ. ಈ ಉದ್ದಿಮೆಗಳು 22 ವಿವಿಧ ಆಡಳಿತ ಇಲಾಖೆಗಳ ಕಾರ್ಯವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿವೆ. ಈ 60 ಸಾರ್ವಜನಿಕ ಉದ್ದಿಮೆಗಳಲ್ಲಿ 2018-19ನೇ ಆರ್ಥಿಕ ವರ್ಷದ ಅಂತ್ಯದಲ್ಲಿ 37 ಸಾರ್ವಜನಿಕ ಉದ್ದಿಮೆಗಳು ಲಾಭದಲ್ಲಿ ನಡೆಯುತ್ತಿವೆ ಹಾಗೂ 18 ಸಾರ್ವಜನಿಕ ಉದ್ದಿಮೆಗಳು ನಷ್ಟ ಅನುಭವಿಸುತ್ತಿವೆ. 05 ಉದ್ದಿಮೆಗಳು ಸೇವಾ ವಲಯದ ಉದ್ದಿಮೆಗಳಾಗಿರುವುದರಿಂದ, ಲಾಭ ನಷ್ಟದ ಪ್ರಶ್ನೆ ಉದ್ಭವಿಸುವುದಿಲ್ಲ. |
| ಆ | ಎಷ್ಟು ಸಾರ್ವಜನಿಕ ಉದ್ದಿಮೆಗಳು ನಷ್ಟವನ್ನು ಅನುಭವಿಸುತ್ತಿವೆ; ನಷ್ಟದಲ್ಲಿರುವ ಉದ್ದಿಮೆಗಳನ್ನು ಮುನ್ನಡೆಸುವ ಕುರಿತು ಸರ್ಕಾರದ ನಿಲುವುಗಳೇನು; | 2018-19ನೇ ಆರ್ಥಿಕ ವರ್ಷದ ಅಂತ್ಯದಲ್ಲಿ 18 ಸಾರ್ವಜನಿಕ ಉದ್ದಿಮೆಗಳು ನಷ್ಟ ಅನುಭವಿಸುತ್ತಿವೆ. ನಷ್ಟ ಅನುಭವಿಸುತ್ತಿರುವ 18 ಉದ್ದಿಮಗಳ ಪೈಕಿ, 13 ಉದ್ದಿಮೆಗಳು ಸಾರ್ವಜನಿಕ ಸಾರಿಗೆ, ವಿದ್ಯುತ್ ಪ್ರಸರಣ, ನೀರಾವರಿ, ಮೂಲಭೂತ ಸೌಲಭ್ಯ ಅಭಿವೃದ್ಧಿ ಮತ್ತು ಸಾಮಾಜಿಕ ಅಭಿವೃದ್ಧಿ(ವಾಣಿಜ್ಯ) ಕ್ಷೇತ್ರದ ಉದ್ದಿಮೆಗಳಾಗಿದ್ದು, ಈ ಉದ್ದಿಮೆಗಳು ಸಮಾಜದ ಎಲ್ಲಾ ಸ್ಥರದ ನಾಗರಿಕರಿಗೆ ಮೂಲಭೂತ ಸೌಕರ್ಯ ಕಲ್ಪಿಸುವ ಉದ್ದಿಮೆಗಳಾಗಿರುವುದರಿಂದ, ಇವುಗಳನ್ನು ದಕ್ಷ ಹಾಗೂ ಸಮರ್ಥವಾಗಿ ಮುನ್ನಡೆಸಲು ಅವಶ್ಯವಿರುವ ಎಲ್ಲ ಕ್ರಮಗಳನ್ನು ಸರ್ಕಾರ ನಿರಂತರವಾಗಿ ಕೈಗೊಳ್ಳುತ್ತಿದೆ. |
| ಇ | ಸಾರ್ವಜನಿಕ ಉದ್ದಿಮೆಗಳ ಅಭಿವೃದ್ಧಿಗಾಗಿ ಮತ್ತು ಬಲವರ್ಧನೆಗಾಗಿ ಸರ್ಕಾರದ ಕ್ರಮಗಳೇನು? | ಸಾರ್ವಜನಿಕ ಉದ್ದಿಮೆಗಳ ಅಭಿವೃದ್ಧಿ ಹಾಗೂ ಬಲವರ್ಧನೆಗಾಗಿ ಸಾರ್ವಜನಿಕ ಉದ್ದಿಮೆಗಳ ಇಲಾಖೆಯು ಈ ಕೆಳಗಿನ ಕ್ರಮಗಳನ್ನು ಕೈಗೊಂಡಿದೆ;<br>• ಪ್ರತೀ ವರ್ಷ ಕರ್ನಾಟಕ ಮೌಲ್ಯಮಾಪನ ಪ್ರಾಧಿಕಾರದ ಮುಖಾಂತರ, ಉದ್ದಿಮೆಗಳ ಮೌಲ್ಯಮಾಪನ ನಡೆಸಿ, ಸದರಿ ಪ್ರಾಧಿಕಾರವು ಸೂಚಿಸುವ ಕ್ರಮಗಳನ್ನು ಆಡಳಿತ ಇಲಾಖೆಗಳ ಮುಖಾಂತರ ಕಾರ್ಯಗತಗೊಳಿಸುತ್ತದೆ.<br>• ಸಾರ್ವಜನಿಕ ಉದ್ದಿಮೆಗಳ ಉದ್ಯೋಗಿಗಳ ಕಾರ್ಯಕ್ಷಮತೆ ಹೆಚ್ಚಿಸಲು, ನುರಿತ ಸಂಸ್ಥೆಗಳ ಮೂಲಕ ತರಬೇತಿ ಕಾರ್ಯಕ್ರಗಳನ್ನು ಆಯೋಜಿಸುತ್ತದೆ.<br>• ಸಾರ್ವಜನಿಕ ಉದ್ದಿಮೆಗಳನ್ನು ಪ್ರೋತ್ಸಾಹಿಸಲು ಮಾನ್ಯ ಮುಖ್ಯಮಂತ್ರಿಯವರ ರತ್ನ ಪ್ರಶಸ್ತಿಯನ್ನು ಪ್ರತೀ ವರ್ಷ ಐದು ಉದ್ದಿಮೆಗಳಿಗೆ ನೀಡಲಾಗುತ್ತದೆ. |

(ಜಗದೀಶ್ ಶೆಟ್ಟರ್)

ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ

ಸಾರ್ವಜನಿಕ ಉದ್ದಿಮೆಗಳ ಸಚಿವರು



ಕರ್ನಾಟಕ ಸರ್ಕಾರ

ಸಂಖ್ಯೆ: ಸಿಐ 98 ಸಿಎಂಸಿ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:11.12.2020

ಇಂದ,

ಸರ್ಕಾರದ ಪ್ರಧಾನ ಕಾರ್ಯದರ್ಶಿ,
(ಎಂ ಎಸ್ ಎಂ ಇ ಮತ್ತು ಗಣಿ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ಬೆಂಗಳೂರು-560 001.

ಇವರಿಗೆ,

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆಯ ಸಚಿವಾಲಯ,
ವಿಧಾನ ಸೌಧ, ಬೆಂಗಳೂರು.

u/g 11/12/2020

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ.ಹೂಲಗೇರಿ ಡಿ.ಎಸ್. (ಲಿಂಗಸುಗೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ. 1130 ಕ್ಕೆ ಉತ್ತರಿಸುವ ಕುರಿತು.

******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ.ಹೂಲಗೇರಿ ಡಿ.ಎಸ್. (ಲಿಂಗಸುಗೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ.1130ಕ್ಕೆ ಉತ್ತರದ 25 ಪ್ರತಿಯನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

(ಸುಮ.ಎಸ್)
ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ
(ಗಣಿ-1).

ಪ್ರತಿಯನ್ನು ಮಾಹಿತಿಗಾಗಿ:

1. ಮಾನ್ಯ ಗಣಿ ಮತ್ತು ಭೂವಿಜ್ಞಾನ ಸಚಿವರ ಆಪ್ತ ಕಾರ್ಯದರ್ಶಿ, ವಿಕಾಸ ಸೌಧ, ಬೆಂಗಳೂರು.
2. ಸರ್ಕಾರದ ಪ್ರಧಾನ ಕಾರ್ಯದರ್ಶಿ (ಎಂ.ಎಸ್.ಎಂ.ಇ & ಗಣಿ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ಇವರ ಆಪ್ತ ಕಾರ್ಯದರ್ಶಿ, ವಿಕಾಸ ಸೌಧ, ಬೆಂಗಳೂರು.
3. ಸರ್ಕಾರದ ಉಪ ಕಾರ್ಯದರ್ಶಿ (ಗಣಿ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ಇವರ ಆಪ್ತ ಸಹಾಯಕರು. ವಿಕಾಸ ಸೌಧ, ಬೆಂಗಳೂರು.
4. ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ), ಸೇವೆಗಳು ಮತ್ತು ಸಮನ್ವಯ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ವಿಕಾಸ ಸೌಧ, ಬೆಂಗಳೂರು.
5. ಶಾಖಾ ರಕ್ಷಾ ಕಡತ.

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1130 |
| ಸದಸ್ಯರ ಹೆಸರು | : | ಶ್ರೀ ಹೂಲಗೇರಿ ಡಿ.ಎಸ್. (ಲಿಂಗಸುಗೂರು) |
| ಉತ್ತರಿಸಬೇಕಾದ ದಿನಾಂಕ | : | 11.12.2020 |
| ಉತ್ತರಿಸುವವರು | : | ಮಾನ್ಯ ಗಣಿ ಮತ್ತು ಭೂವಿಜ್ಞಾನ ಸಚಿವರು |

<table>
<tr><th>ಕ್ರ.ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>2018-19 ರಿಂದ 2019-20 ರವರೆಗೂ ಹಟ್ಟಿ ಚಿನ್ನದ ಗಣಿ ಕಂಪನಿಯಿಂದ ಉತ್ಪತ್ತಿಯಾಗಿರುವ ಚಿನ್ನ ಎಷ್ಟು; ಇದರಿಂದ ಸರ್ಕಾರಕ್ಕೆ ಬಂದಿರುವ ಆದಾಯ ಎಷ್ಟು;</td><td>ಹಟ್ಟಿ ಚಿನ್ನದ ಗಣಿ ಕಂಪನಿಯಿಂದ ಉತ್ಪತ್ತಿಯಾಗಿರುವ ಚಿನ್ನ ಮತ್ತು ಸರ್ಕಾರಕ್ಕೆ ಬಂದಿರುವ ಆದಾಯಗಳ ವಿವರ:
<table>
<tr><td></td><td></td><td colspan="2">(ರೂ.ಕೋಟಿ ಗಳಲ್ಲಿ)</td></tr>
<tr><td></td><td></td><td colspan="2">ಸರ್ಕಾರಕ್ಕೆ ಬಂದಿರುವ ಆದಾಯ</td></tr>
<tr><td>ವರ್ಷ</td><td>ಉತ್ಪತ್ತಿಯಾಗಿರುವ ಚಿನ್ನ (ಕಿ.ಗ್ರಾಂ ಗಳಲ್ಲಿ)</td><td>(ಡಿವಿಡೆಂಟ್ ರೂಪದಲ್ಲಿ)</td><td>(ರಾಜಧನ, ಡಿ.ಎಮ್.ಎಫ್ ಮತ್ತು ಡಿವಿಡೆಂಟ್ ರೂಪದಲ್ಲಿ)</td></tr>
<tr><td>2018-19</td><td>1663.16</td><td>2.20</td><td>27.28</td></tr>
<tr><td>2019-20</td><td>1724.64</td><td>11.01</td><td>32.01</td></tr>
</table></td></tr>
<tr><td>ಆ)</td><td>ಹಟ್ಟಿ ಚಿನ್ನದ ಗಣಿ ಕಂಪನಿಯ ಕಾರ್ಮಿಕರ ಏಳಿಗೆಗಾಗಿ ಸರ್ಕಾರ ತೆಗೆದುಕೊಂಡ ಕ್ರಮಗಳೇನು;</td><td>ಹಟ್ಟಿ ಚಿನ್ನದ ಗಣಿ ಕಂಪನಿಯ ಕಾರ್ಮಿಕರಿಗೆ ಕಂಪನಿಯಿಂದ ವಿವಿಧ ನಿಯಮಾನುಸಾರ ಲಭ್ಯವಾಗುವ ವೇತನ ಪರಿಷ್ಕರಣೆ, ವಿವಿಧ ಭತ್ಯೆಗಳು, ವಸತಿ, ವೈದ್ಯಕೀಯ, ಕ್ಯಾಂಟೀನ್, ಪ್ರೋತ್ಸಾಹ ಧನ, ಕಾರ್ಮಿಕರ ಮಕ್ಕಳಿಗೆ ವಿದ್ಯಾಭ್ಯಾಸಕ್ಕಾಗಿ ಪ್ರತಿ ತಿಂಗಳು ಸಹಾಯ ಧನ (ಸ್ಟೈಫಂಡ್) ಹಾಗೂ ಇನ್ನಿತರ ಸೌಲಭ್ಯಗಳನ್ನು ಒದಗಿಸುತ್ತದೆ.</td></tr>
<tr><td>ಇ)</td><td>2018-19, 2019-20 ಹಾಗೂ 2020-21ನೇ ಸಾಲಿನಲ್ಲಿ ರಾಯಚೂರು ಜಿಲ್ಲೆಯ ಲಿಂಗಸುಗೂರು ವಿಧಾನಸಭಾ ಕ್ಷೇತ್ರಕ್ಕೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯಿಂದ (DMF) ಮಂಜೂರಾಗಿರುವ ಅನುದಾನ ಎಷ್ಟು; ಸದರಿ ಅನುದಾನದಿಂದ ಕೈಗೆತ್ತಿಕೊಂಡಿರುವ ಕಾಮಗಾರಿಗಳಾವು? (ವಿವರ ನೀಡುವುದು).</td><td>ಭಾರತ ಸರ್ಕಾರವು ದಿ:12.01.2015 ರಿಂದ ಜಾರಿಗೆ ಬರುವಂತೆ ಗಣಿ ಮತ್ತು ಖನಿಜ (ಅಭಿವೃದ್ಧಿ ಮತ್ತು ನಿಯಂತ್ರಣ) ಕಾಯ್ದೆ 1957 ನಿಯಮ 9(ಬಿ) ತಿದ್ದುಪಡಿ ಅನ್ವಯ ಮುಖ್ಯ ಖನಿಜ ಗಣಿಗಾರಿಕೆಯಿಂದ ಹಾನಿಯಾದ ಪ್ರದೇಶಗಳ ಸುಧಾರಣೆ ಮತ್ತು ಸಂತ್ರಸ್ತರಾದ ಜನರ ಉಪಯೋಗಕ್ಕಾಗಿ District Mineral Foundation (DMF) ನಿಧಿಯನ್ನು ಸ್ಥಾಪಿಸಲಾಗಿರುತ್ತದೆ.</td></tr>
</table>

ಅದರಂತೆ ರಾಯಚೂರು ಜಿಲ್ಲೆಯ ಲಿಂಗಸುಗೂರು ವಿಧಾನಸಭಾ ಕ್ಷೇತ್ರಕ್ಕೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯಿಂದ DMF ನಿಧಿಯಿಂದ ಬಿಡುಗಡೆ ಮಾಡಿದ ಅನುದಾನದ ವಿವರ ಈ ಕೆಳಗಿನಂತಿರುತ್ತದೆ.

| ಕ್ರ. ಸಂ | ಯೋಜನೆಗಳ ವಿವರ | ಬಿಡುಗಡೆಯಾದ ಅನುದಾನ (ಲಕ್ಷ ರೂ.ಗಳಲ್ಲಿ) |
|---|---|---|
| 1 | ಆರೋಗ್ಯ | 117.13 |
| 2 | ಶಿಕ್ಷಣ | 814.76 |
| 3 | ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಂಬಂಧ ಕಾರ್ಯಕ್ರಮ | 27.00 |
| 4 | ವಯಸ್ಸಾದ ಮತ್ತು ಅಂಗವಿಕಲ ವ್ಯಕ್ತಿಗಳ ಕಲ್ಯಾಣ | 45.07 |
| 5 | ಭೌತಿಕ ಮೂಲಸೌಕರ್ಯ | 540.33 |
| 6 | ಕುಡಿಯುವ ನೀರು | 249.00 |
| | ಒಟ್ಟು | **1793.29** |

**ಸಂಖ್ಯೆ: ಸಿಐ 98 ಸಿಎಂಸಿ 2020**

**(ಸಿ.ಸಿ. ಪಾಟೀಲ್)**

ಗಣಿ ಮತ್ತು ಭೂವಿಜ್ಞಾನ ಸಚಿವರು



**ಕರ್ನಾಟಕ ಸರ್ಕಾರ**

ಸಂಖ್ಯೆ:ನಅಇ 415 ಎಸ್.ಎಫ್.ಸಿ 2020

ಕರ್ನಾಟಕ ಸರ್ಕಾರ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 10-12-2020.

11/12/2020

**ಇವರಿಂದ:**
ಸರ್ಕಾರದ ಕಾರ್ಯದರ್ಶಿಗಳು,
ನಗರಾಭಿವೃದ್ಧಿ ಇಲಾಖೆ,
ಬೆಂಗಳೂರು.

**ಇವರಿಗೆ,**
ಕಾರ್ಯದರ್ಶಿಗಳು,
ಕರ್ನಾಟಕ ಸಭೆ
ವಿಧಾನಸೌಧ,
ಬೆಂಗಳೂರು.

**ಮಾನ್ಯರೇ,**

**ವಿಷಯ:** ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಯತೀಂದ್ರ ಸಿದ್ದರಾಮಯ್ಯ ಡಾ|| (ವರುಣ) ರವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1040ಕ್ಕೆ ಉತ್ತರಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂದಿಸಿದಂತೆ, ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಯತೀಂದ್ರ ಸಿದ್ದರಾಮಯ್ಯ ಡಾ|| (ವರುಣ) ರವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1040ಕ್ಕೆ ಉತ್ತರದ 75 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲು ನಾನು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

ಲಲಿತಾಬಾಯಿ.ಕೆ
**(ಲಲಿತಾಬಾಯಿ ಕೆ.)**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ.

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1040 |
| ಸದಸ್ಯರ ಹೆಸರು | : | ಶ್ರೀ ಯತೀಂದ್ರ ಸಿದ್ದರಾಮಯ್ಯ ಡಾ॥ (ವರುಣ) |
| ಉತ್ತರಿಸಬೇಕಾದ ದಿನಾಂಕ | : | 11-12-2020 |
| ಉತ್ತರಿಸುವ ಸಚಿವರು | : | ಮಾನ್ಯ ನಗರಾಭಿವೃದ್ಧಿ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ನಗರ ವಿಕಾಸ ಯೋಜನೆಯಡಿ ಕಳೆದ ಒಂದು ವರ್ಷದಿಂದ ರಾಜ್ಯದ ಯಾವ ಯಾವ ಮಹಾನಗರ ಪಾಲಿಕೆಗಳಿಗೆ ಎಷ್ಟೆಷ್ಟು ಮೊತ್ತದ ಅನುದಾನವನ್ನು ಬಿಡುಗಡೆಗೊಳಿಸಲಾಗಿದೆ (ಮಾಹಿತಿ ನೀಡುವುದು); | ಮಹಾತ್ಮ ಗಾಂಧಿ ನಗರ ವಿಕಾಸ ಯೋಜನೆಯನ್ನು 2019-20 ನೇ ಸಾಲಿನ ಆಯವ್ಯಯದಲ್ಲಿ ರಾಜ್ಯದ ಎಲ್ಲಾ 10 ಮಹಾನಗರ ಪಾಲಿಕೆಗಳಲ್ಲಿ ಅನುಷ್ಠಾನಗೊಳಿಸಲು ಒಟ್ಟಾರೆ ರೂ.1325.00ಕೋಟಿಗಳನ್ನು ಮಂಜೂರು ಮಾಡಲಾಗಿರುತ್ತದೆ. ಈವರೆವಿಗೂ ಯಾವುದೇ ಅನುದಾನವನ್ನು ಬಿಡುಗಡೆ ಮಾಡಿರುವುದಿಲ್ಲ. |
| (ಆ) | ಸದರಿ ಯೋಜನೆಯಲ್ಲಿ ಯಾವ ಯಾವ ಅಭಿವೃದ್ಧಿ ಕಾರ್ಯಗಳನ್ನು ಕೈಗೆತ್ತಿಕೊಳ್ಳಲಾಗುವುದು (ಮಾಹಿತಿ ನೀಡುವುದು)? | ಸರ್ಕಾರದ ಆದೇಶ ಸಂಖ್ಯೆ: ನಅಇ 47 ಎಸ್.ಎಫ್.ಸಿ. 2019ದಿನಾಂಕ: 09-08-2019 ರಲ್ಲಿನ ಮಾರ್ಗಸೂಚಿಯಂತೆ ಶೇ. 24.10ರ ನಿಧಿಯಲ್ಲಿ ಪೌರ ಕಾರ್ಮಿಕರ ಕಲ್ಯಾಣ ಯೋಜನೆಗಳು, ವ್ಯಕ್ತಿ ಸಂಬಂಧ ಮತ್ತು ಸಮುದಾಯ ಸಂಬಂಧ ಅನುಕೂಲತೆಯ ಕಾಮಗಾರಿಗಳು ಕುಡಿಯುವ ನೀರಿನ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗುತ್ತಿದೆ.<br><br>ಇನ್ನುಳಿದಂತೆ ಕೇಂದ್ರ ಪುರಸ್ಕೃತ ಯೋಜನೆಗಳಾದ ಅಮೃತ್, ಜೆಎನ್ ನರ್ಮ್ ಮತ್ತು ಸ್ವಚ್ಛ ಭಾರತ್ ಅಭಿಯಾನದ ಕಾರ್ಯಕ್ರಮಗಳಿಗೆ ಮತ್ತು ವಿತರಣಾ ಜಾಲ/ಲ್ಯಾಟರಲ್ಸ್ ಕಾಮಗಾರಿಗಳು, ಅವಶ್ಯವಿರುವ ಪ್ರಮುಖ ಜಂಕ್ಷನ್‌ಗಳಲ್ಲಿ ಗ್ರೇಡ್ ಸಪರೇಟರ್ ನಿರ್ಮಾಣ ಕಾಮಗಾರಿಗಳು, ರಸ್ತೆ ಅಭಿವೃದ್ಧಿ ಕಾಮಗಾರಿ, ರಸ್ತೆ ಬದಿ ಚರಂಡಿ ನಿರ್ಮಾಣ ಕಾಮಗಾರಿ, ಫುಟ್‌ಪಾತ್ ಅಭಿವೃದ್ಧಿ, ನಗರದ ಒಳ ಮತ್ತು ಹೊರ ವರ್ತುಲ ರಸ್ತೆಗಳನ್ನು ಅಭಿವೃದ್ಧಿಪಡಿಸುವುದು, ಮೇಲ್ಸೇತುವೆ ಮತ್ತು ಕೆಳ ಸೇತುವೆ ನಿರ್ಮಾಣ ಕಾಮಗಾರಿಗಳು, ಘನತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿದ ಕಾಮಗಾರಿಗಳು ಮತ್ತು ಸಂಚಾರ ವ್ಯವಸ್ಥೆ ಸುಧಾರಣಾ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿದೆ. |

ಕಡತ ಸಂಖ್ಯೆ:ನಅಇ 415 ಎಸ್.ಎಫ್.ಸಿ 2020

(ಬಿ.ಎ ಬಸವರಾಜ)
ನಗರಾಭಿವೃದ್ಧಿ ಸಚಿವರು

## ಕರ್ನಾಟಕ ಸರ್ಕಾರ

ಸಂಖ್ಯೆ: ನಅಇ 139 ಜಿಇಎಲ್ 2020(e)

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ:10.12.2020

11/12/2020

**ಇವರಿಂದ:**
ಸರ್ಕಾರದ ಕಾರ್ಯದರ್ಶಿಗಳು,
ನಗರಾಭಿವೃದ್ಧಿ ಇಲಾಖೆ,
ವಿಕಾಸಸೌಧ, ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭಾ ಸಚಿವಾಲಯ,
ವಿಧಾನಸೌಧ, ಬೆಂಗಳೂರು.

**ಮಾನ್ಯರೇ,**

**ವಿಷಯ:** ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ರಾಜೇಗೌಡ ಟಿ.ಡಿ. (ಶೃಂಗೇರಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1111ಕ್ಕೆ ಉತ್ತರಿಸುವ ಬಗ್ಗೆ.

** ** **

ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ರಾಜೇಗೌಡ ಟಿ.ಡಿ. (ಶೃಂಗೇರಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1111ಕ್ಕೆ ಸಿದ್ಧಪಡಿಸಲಾಗಿರುವ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ನಿಮ್ಮ ನಂಬುಗೆಯ,

**(ಟಿ.ಲಕ್ಷ್ಮೀಕಾಂತ್)**
ಶಾಖಾಧಿಕಾರಿ,
ನಗರಾಭಿವೃದ್ಧಿ ಇಲಾಖೆ.
(ಎಂಎ–2 ಶಾಖೆ)



# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1111 |
| ಸದಸ್ಯರ ಹೆಸರು | : | ಶ್ರೀ ರಾಜೇಗೌಡ ಟಿ.ಡಿ. ಮಾನ್ಯ ವಿಧಾನಸಭಾ ಸದಸ್ಯರು (ಶೃಂಗೇರಿ ವಿ.ಸ.ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 11-12-2020 |
| ಉತ್ತರಿಸುವವರು | : | ಮಾನ್ಯ ಪೌರಾಡಳಿತ, ತೋಟಗಾರಿಕೆ ಮತ್ತು ರೇಷ್ಮೆ ಸಚಿವರು. |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಚಿಕ್ಕಮಗಳೂರು ಜಿಲ್ಲೆ ಎನ್.ಆರ್.ಪುರ ತಾಲ್ಲೂಕಿನ ಮುಖ್ಯ ರಸ್ತೆಯಾದ ಬಸ್‌ಸ್ಟ್ಯಾಂಡಿನಿಂದ ಪ್ರವಾಸಿ ಮಂದಿರದವರೆಗಿನ ರಸ್ತೆ ಕಿರಿದಾಗಿರುವುದರಿಂದ ಟ್ರಾಫಿಕ್ ಸಮಸ್ಯೆ ಉಂಟಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| (ಆ) | ಬಂದಿದ್ದಲ್ಲಿ, ಕಿರಿದಾಗಿರುವ ರಸ್ತೆಯನ್ನು ಅಗಲೀಕರಣಗೊಳಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಇಲ್ಲ |
| (ಇ) | ರಸ್ತೆ ಅಗಲೀಕರಣಗೊಳಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; ಯಾವ ಕಾಲಮಿತಿಯೊಳಗೆ ರಸ್ತೆ ಅಗಲೀಕರಣ ಕಾಮಗಾರಿ ಪ್ರಾರಂಭಿಸಲಾಗುತ್ತದೆ? (ವಿವರ ನೀಡುವುದು) | ಮೇಲಿನ ಉತ್ತರದನ್ವಯ ಅನ್ವಯಿಸುವುದಿಲ್ಲ. |

ಸಂಖ್ಯೆ: ನಅಇ 139 ಜಿಇಎಲ್ 2020(ಇ)

(ಡಾ॥ ನಾರಾಯಣ ಗೌಡ)
ಪೌರಾಡಳಿತ, ತೋಟಗಾರಿಕೆ ಹಾಗೂ ರೇಷ್ಮೆ ಸಚಿವರು



ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ, ಡಾ. ಬಿ. ಆರ್. ಅಂಬೇಡ್ಕರ್ ರಸ್ತೆ,
ಬೆಂಗಳೂರು –560001. ದೂ. 22034319

ಸಂಖ್ಯೆ: ಸಿಐ 123 ಸಪ್ರಕೈ 2020

ದಿನಾಂಕ: 10.12.2020

U/S
11/12/2020

**ಇವರಿಂದ:**

ಸರ್ಕಾರದ ಪ್ರಧಾನ ಕಾರ್ಯದರ್ಶಿ,
(ಎಂ.ಎಸ್.ಎಂ.ಇ. & ಗಣಿ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ವಿಕಾಸಸೌಧ, ಬೆಂಗಳೂರು–01.

**ಇವರಿಗೆ:**

ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ
ವಿಧಾನಸೌಧ, ಬೆಂಗಳೂರು–01.

**ಮಾನ್ಯರೆ,**

**ವಿಷಯ:** ಮಾನ್ಯ ಕರ್ನಾಟಕ ವಿಧಾನಸಭೆ ಸದಸ್ಯರಾದ ಶ್ರೀ ಈಶ್ವರ ಖಂಡ್ರೆ (ಭಾಲ್ಕಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1103 ಕ್ಕೆ ಉತ್ತರಿಸುವ ಬಗ್ಗೆ.

* * * * *

ಮಾನ್ಯ ಕರ್ನಾಟಕ ವಿಧಾನಸಭೆ ಸದಸ್ಯರಾದ ಶ್ರೀ ಈಶ್ವರ ಖಂಡ್ರೆ (ಭಾಲ್ಕಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 326ಕ್ಕೆ ದಿನಾಂಕ:11.12.2020 ರಂದು ವಿಧಾನ ಸಭೆಯಲ್ಲಿ ಉತ್ತರಿಸಬೇಕಾಗಿದ್ದು, ಸದರಿ ಪ್ರಶ್ನೆಯ ಉತ್ತರಗಳ 25 ಮುದ್ರಿತ ಪ್ರತಿಗಳು ಹಾಗೂ 5 ಸಿಡಿಗಳನ್ನು ಈ ಪತ್ರದೊಂದಿಗೆ ಕಳುಹಿಸಿಕೊಡಲು ನಿರ್ದೇಶಿತಳಾಗಿದ್ದೇನೆ.

ತಮ್ಮ ನಂಬುಗೆಯ,

Rlatha
(ಆರ್. ಲತಾ)
ಪೀಠಾಧಿಕಾರಿ (ಸಪ್ರಕೈ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

<u>ಪ್ರತಿಯನ್ನು ಮಾಹಿತಿಗಾಗಿ:</u>

1. ಮಾನ್ಯ ಮುಖ್ಯಮಂತ್ರಿಗಳ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿ, ವಿಧಾನ ಸೌಧ, ಬೆಂಗಳೂರು–01.
2. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿ, (ಎಂ.ಎಸ್.ಎಂ.ಇ. & ಗಣಿ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ವಿಕಾಸ ಸೌಧ, ಬೆಂಗಳೂರು–01.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1103
ವಿಧಾನ ಸಭೆ ಸದಸ್ಯರ ಹೆಸರು : ಶ್ರೀ ಈಶ್ವರ್ ಖಂಡ್ರೆ (ಭಾಲ್ಕಿ)
ಉತ್ತರಿಸುವವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು
ಉತ್ತರಿಸಬೇಕಾದ ದಿನಾಂಕ : 11.12.2020

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ರಾಜ್ಯದಲ್ಲಿ ಒಟ್ಟು ಎಷ್ಟು ಸೂಕ್ಷ್ಮ, ಸಣ್ಣ ಹಾಗೂ ಮಧ್ಯಮ ಕೈಗಾರಿಕೆ (ಎಂ.ಎಸ್.ಎಂ.ಇ)ಗಳು ಕಾರ್ಯನಿರ್ವಹಿಸುತ್ತಿವೆ; ಎಷ್ಟು ಜನರಿಗೆ ಎಂ.ಎಸ್.ಎಂ.ಇಗಳಿಂದ ಉದ್ಯೋಗ ಸೃಷ್ಠಿಯಾಗಿದೆ; | ರಾಜ್ಯದಲ್ಲಿ 30/6/2020ರ ಅಂತ್ಯದವರೆಗೆ ಒಟ್ಟು 8,75,336 ಸೂಕ್ಷ್ಮ, ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳು ನೋಂದಣಿಯಾಗಿರುತ್ತವೆ. ಇವುಗಳಲ್ಲಿ 60,21,569 ಉದ್ಯೋಗಿಗಳು ಕಾರ್ಯ ನಿರ್ವಹಿಸುತ್ತಿರುವುದಾಗಿ ಕೈಗಾರಿಕೆಗಳು ನೋಂದಾಯಿಸಿರುತ್ತವೆ. |
| ಆ) | ಕೋವಿಡ್-19ರ ನಂತರ ಎಷ್ಟು ಸೂಕ್ಷ್ಮ, ಸಣ್ಣ ಹಾಗೂ ಮಧ್ಯಮ ಕೈಗಾರಿಕೆ (ಎಂ.ಎಸ್.ಎಂ.ಇ) ಗಳನ್ನು ಮುಚ್ಚಲಾಗಿದೆ; ಎಷ್ಟು ಜನ ಉದ್ಯೋಗ ಕಳೆದುಕೊಂಡಿದ್ದಾರೆ; ಎಷ್ಟು ಆರ್ಥಿಕ ನಷ್ಟವಾಗಿದೆ; (ಸಂಪೂರ್ಣ ವಿವರ ಒದಗಿಸುವುದು) | 2020ನೇ ಸಾಲಿನಲ್ಲಿ ಕಾಣಿಸಿಕೊಂಡ ಕೊರೋನಾ ಖಾಯಿಲೆಯಿಂದಾಗಿ ಲಾಕ್‌ಡೌನ್ ಪ್ರಾರಂಭದಲ್ಲಿ ಅಗತ್ಯ ಸೇವೆಯನ್ನು ಒದಗಿಸುವ ಕೈಗಾರಿಕೆಗಳ ಹೊರತು ಪಡಿಸಿ ಎಲ್ಲಾ ಕೈಗಾರಿಕೆಗಳು ತಮ್ಮ ಚಟುವಟಿಕೆಯನ್ನು ಸ್ಥಗಿತಗೊಳಿಸಿದ್ದವು. ನಂತರ ಲಾಕ್‌ಡೌನ್ ಹಂತ ಹಂತವಾಗಿ ತೆರವುಗೊಳಿಸಿದಾಗ ಈ ಕೈಗಾರಿಕೆಗಳಿಗೆ ತಮ್ಮ ಚಟುವಟಿಕೆಯನ್ನು ಪ್ರಾರಂಭಿಸಲು ಅನುಮತಿ ನೀಡಲಾಯಿತು. ಈ ಅನುಮತಿಯನ್ನು ಏಕಕಾಲದಲ್ಲಿ ನೀಡಲು ಸಾಧ್ಯವಾಗದ ಕಾರಣ ಕಾರ್ಯಾರಂಭ ಮಾಡಿದ ಕೈಗಾರಿಕೆಗಳ ಅಂಕಿ ಅಂಶಗಳನ್ನು ನಿರ್ವಹಿಸಲು ಸಾಧ್ಯವಾಗಿರುವುದಿಲ್ಲ. ಆದರೆ ಒಂದು ಅಂದಾಜಿನ ಪ್ರಕಾರ ಶೇ.95 ರಷ್ಟು ಕೈಗಾರಿಕೆಗಳು ತಮ್ಮ ಚಟುವಟಿಕೆಗಳನ್ನು ಪ್ರಾರಂಭಿಸಿದ್ದು,ಶೇ.92 ರಷ್ಟು ಕಾರ್ಮಿಕರು ಕಾರ್ಯನಿರ್ವಹಿಸುತ್ತಿದ್ದಾರೆ. |
| ಇ) | ಕೋವಿಡ್-19ರಿಂದ ಸಂಕಷ್ಟಕ್ಕೆ ಒಳಗಾದ ಎಂ.ಎಸ್.ಎಂ.ಇ ಗಳ ಪುನಶ್ಚೇತನಕ್ಕೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ? | ಕೇಂದ್ರ ಸರ್ಕಾರ ಘೋಷಿಸಿರುವ "ಆತ್ಮ ನಿರ್ಭರ ಭಾರತ ಅಭಿಯಾನ"ದ ಅಡಿಯಲ್ಲಿ ಅತೀ ಸಣ್ಣ, ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳನ್ನು ಪುನಶ್ಚೇತನಗೊಳಿಸಲು ಮತ್ತು ಉದ್ಯಮಗಳಿಗೆ ಆರ್ಥಿಕ ನೆರವು ನೀಡುವ ಯೋಜನೆಯಲ್ಲಿ ಈ ಕೆಳಗಿನ ನೆರವು ದೊರೆತಿದೆ.<br><br>ಭಾರತ ಸರ್ಕಾರವು "ಇ.ಸಿ.ಎಲ್.ಜಿ"-ಎಮರ್ಜೆನ್ಸಿ ಕ್ರೆಡಿಟ್ ಲೈನ್ ಗ್ಯಾರಂಟಿ ಯೋಜನೆಯನ್ನು ಜಾರಿಗೆ ತಂದಿದ್ದು, ಇದರನ್ವಯ ಫೆಬ್ರವರಿ 2020ರ ಅಂತ್ಯಕ್ಕೆ ಬ್ಯಾಂಕ್‌ಗಳಲ್ಲಿ ಬಾಕಿ ಇರುವ ಎಂ.ಎಸ್.ಎಂ.ಇ ಘಟಕಗಳ ಸಾಲದ ಮೊತ್ತಕ್ಕೆ ಶೇ.20ರಷ್ಟು ಹೆಚ್ಚುವರಿ ಸಾಲವನ್ನು ಯಾವುದೇ ಹೆಚ್ಚುವರಿ ಖಾತರಿ ಇಲ್ಲದೇ ನೀಡುವ ಯೋಜನೆಯನ್ನು ಜಾರಿಗೆ ತಂದಿರುತ್ತದೆ. ಇದರಡಿಯಲ್ಲಿ ಇದುವರೆಗೆ ಬ್ಯಾಂಕ್‌ಗಳು ನೀಡಿರುವ ಸಾಲದ ವಿವರಗಳು ಈ ಕೆಳಗಿನಂತಿವೆ. |

| | ಒಟ್ಟು ಘಟಕಗಳು | ಒಟ್ಟು ಸಾಲದ ಮೊತ್ತ ರೂ.ಲಕ್ಷಗಳಲ್ಲಿ | ಶೇಕಡವಾರು |
|---|---|---|---|
| ಅರ್ಹವಿರುವ ಖಾತೆಗಳು | 3,00,459 | 10,69,527 | |
| ಸಾಲ ಮಂಜೂರಾತಿ | 2,03,014 | 8,02,953 | 75.08 % |

| | | | |
|---|---|---|---|
| ಸಾಲ ಬಿಡುಗಡೆ | 1,46,409 | 6,66,116 | 62.28% |

**ಕರ್ನಾಟಕ ಸರ್ಕಾರವು** ಅತೀ ಸಣ್ಣ, ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳನ್ನು ಪುನಶ್ಚೇತನಗೊಳಿಸಲು ಈ ಕೆಳಗಿನ ನೆರವು ಕಲ್ಪಿಸಿದೆ.

1. ಇಂಧನ ಇಲಾಖೆಯು ಸೂಕ್ಷ್ಮ, ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳ ಏಪ್ರಿಲ್ ಮತ್ತು ಮೇ 2020 ತಿಂಗಳ ಬೇಡಿಕೆ ಶುಲ್ಕ ಮತ್ತು ಸ್ಥಿರ ಶುಲ್ಕವನ್ನು ಮನ್ನಾ ಮಾಡಿರುತ್ತದೆ.

2. ಇಂಧನ ಇಲಾಖೆಯು ವಿದ್ಯುತ್ ಬಿಲ್‌ನ್ನು ಪ್ರಾಮಾಣಿಕವಾಗಿ ನಿಗದಿತ ಅವಧಿಯೊಳಗೆ ಪಾವತಿಸುವ ಕೈಗಾರಿಕೆಗಳಿಗೆ ರಿಯಾಯಿತಿಯನ್ನು ನೀಡಿರುತ್ತದೆ. ಹೆಚ್‌ಟಿ ಗರಿಷ್ಠ ಮಿತಿ ರೂ.1 ಲಕ್ಷ, ಎಲ್‌ಟಿ ಗರಿಷ್ಠ ಮಿತಿ ರೂ.10,000/-.

| | |
|---|---|
| 1 ರಿಂದ 5 ದಿನದೊಳಗೆ ಪಾವತಿಸಿದಲ್ಲಿ | ಶೇ 1% ರಿಯಾಯಿತಿ |
| 6 ರಿಂದ 15 ದಿನದೊಳಗೆ ಪಾವತಿಸಿದಲ್ಲಿ | ಶೇ 0.5% ರಿಯಾಯಿತಿ |
| 15 ರಿಂದ 30 ದಿನದೊಳಗೆ ಪಾವತಿಸಿದಲ್ಲಿ | ಯಾವುದೇ ರಿಯಾಯಿತಿ ಇರುವುದಿಲ್ಲ |

3. ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯು ಉದ್ಯಮಶೀಲರು ತಮಗೆ ಹಂಚಿಕೆಯಾದ ನಿವೇಶನಗಳ ಕಂತು ಮಾರ್ಚ್, ಏಪ್ರಿಲ್ ಮತ್ತು ಮೇ 2020 ತಿಂಗಳಲ್ಲಿ ಪಾವತಿಸದಿದ್ದಲ್ಲಿ ಆ ಪಾವತಿಯನ್ನು ಕ್ರಮವಾಗಿ 3 ತಿಂಗಳು ಮುಂದೂಡಲಾಗಿದೆ ಮತ್ತು ಈ ಮೊತ್ತಕ್ಕೆ ಯಾವುದೇ ಬಡ್ಡಿಯನ್ನು ವಿಧಿಸುವುದಿಲ್ಲ.

4. ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮವು ಉದ್ಯಮಶೀಲರು ತಮಗೆ ಹಂಚಿಕೆಯಾದ ನಿವೇಶನಗಳ ಕಂತು, ಮಳಿಗೆಗಳ ಬಾಡಿಗೆ ಮತ್ತು ನೀರಿನ ಶುಲ್ಕಗಳ ಕಂತನ್ನು ಈ ಕೆಳಗಿನಂತೆ ಪಾವತಿಸಲು ಅವಕಾಶ ಕಲ್ಪಿಸಲಾಗಿದೆ. ಇದಕ್ಕೆ ಯಾವುದೇ ಬಡ್ಡಿಯನ್ನು ವಿಧಿಸಲಾಗುವುದಿಲ್ಲ.

| | |
|---|---|
| ಏಪ್ರಿಲ್ 2020 ತಿಂಗಳ ಕಂತು | ಜೂನ್ 2020 ತಿಂಗಳ ಕಂತಿನ ಜೊತೆ ಪಾವತಿಸತಕ್ಕದ್ದು |
| ಮೇ 2020 ತಿಂಗಳ ಕಂತು | ಜುಲೈ 2020 ತಿಂಗಳ ಕಂತಿನ ಜೊತೆ ಪಾವತಿಸತಕ್ಕದ್ದು |
| ಜೂನ್ 2020 ತಿಂಗಳ ಕಂತು | ಆಗಸ್ಟ್ 2020 ತಿಂಗಳ ಕಂತಿನ ಜೊತೆ ಪಾವತಿಸತಕ್ಕದ್ದು |

ಸಿಐ 126 ಎಸ್‌ಎಸ್‌ಐ 2020

(ಜಗದೀಶ ಶೆಟ್ಟರ)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು



ಕರ್ನಾಟಕ ಸರ್ಕಾರ

ಸಂಖ್ಯೆ: ಸಿಒ 402 ಸಿಎಲ್‌ಎಸ್ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:09.12.2020

ಇವರಿಂದ,

**ಸರ್ಕಾರದ ಪ್ರಧಾನ ಕಾರ್ಯದರ್ಶಿ,**
ಸಹಕಾರ ಇಲಾಖೆ,
ಬೆಂಗಳೂರು – 560 001.

1021 11/12/2020

ಇವರಿಗೆ,

**ಕಾರ್ಯದರ್ಶಿ,**
ಕರ್ನಾಟಕ ವಿಧಾನ ಸಭೆ ಸಚಿವಾಲಯ
ವಿಧಾನಸೌದ,
ಬೆಂಗಳೂರು.

ಮಾನ್ಯರೇ,

ವಿಷಯ: ಕರ್ನಾಟಕ ವಿಧಾನ ಸಭಾ ಸದಸ್ಯರಾದ ಶ್ರೀ ದೊಡ್ಡಗೌಡರ ಮಹಾಂತೇಶ್ ಬಸವಂತರಾಯ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1021 ಕ್ಕೆ ದಿ:11.12.2020 ರಂದು ಉತ್ತರಿಸುವ ಬಗ್ಗೆ.

******

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭಾ ಸದಸ್ಯರಾದ ಶ್ರೀ ದೊಡ್ಡಗೌಡರ ಮಹಾಂತೇಶ್ ಬಸವಂತರಾಯ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1021 ಕ್ಕೆ ಸಂಬಂಧಿಸಿದಂತೆ ಉತ್ತರದ 25 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತಳಾಗಿದ್ದೇನೆ.

ತಮ್ಮ ನಂಬುಗೆಯ,

**(ಕೆ.ಎಂ. ಆಶಾ)**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ.

## ಕರ್ನಾಟಕ ವಿಧಾನ ಸಭೆ

ಮಾನ್ಯ ವಿಧಾನ ಸಭೆ ಸದಸ್ಯರು : ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1021

ಉತ್ತರಿಸಬೇಕಾದ ದಿನಾಂಕ : 11.12.2020

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರೈತರ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಬಾಡಿಗೆ ಕಟ್ಟಡಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ) | ಬಂದಿದ್ದಲ್ಲಿ, ಈ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಿಗೆ ಸ್ವಂತ ಕಟ್ಟಡಗಳ ನಿರ್ಮಾಣಕ್ಕೆ ಅನುದಾನ ಒದಗಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ; | ಪ್ರಸಕ್ತ ಸಾಲಿನ ಆಯವ್ಯಯದಲ್ಲಿ ಸಹಕಾರ ಸಂಘಗಳಿಗೆ ಸ್ವಂತ ಕಟ್ಟಡಗಳ ನಿರ್ಮಾಣ ಯೋಜನೆಗೆ ಅನುದಾನದ ಅವಕಾಶ ಕಲ್ಪಿಸಿರುವುದಿಲ್ಲ. |
| ಇ) | ಈ ಕುರಿತು ಸರ್ಕಾರದ ಮುಂದೆ ಯಾವುದಾದರೂ ಯೋಜನೆ ಇದೆಯೇ? | ಇಲ್ಲ. |

ಸಂಖ್ಯೆ: ಸಿಒ 402 ಸಿಎಲ್‌ಎಸ್ 2020

(ಎಸ್.ಟಿ ಸೋಮಶೇಖರ್)
ಸಹಕಾರ ಸಚಿವರು



ಕರ್ನಾಟಕ ಸರ್ಕಾರ

ಸಂಖ್ಯೆ : ಸಿಒ 617 ಎಂಆರ್‌ಇ 2020

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ:21.06.2021

ಇವರಿಂದ :

ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಸಹಕಾರ ಇಲಾಖೆ,
ಬಹುಮಹಡಿಕಟ್ಟಡ,
ಬೆಂಗಳೂರು.

ಇವರಿಗೆ :

ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನಸೌಧ
ಬೆಂಗಳೂರು.

ಮಾನ್ಯರೇ,

ವಿಷಯ : ವಿಧಾನ ಸಭೆಯ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1012ಕ್ಕೆ ಉತ್ತರ ಒದಗಿಸುವ ಬಗ್ಗೆ

ಉಲ್ಲೇಖ : ಪತ್ರ ಸಂಖ್ಯೆ:ಪ್ರಶಾವಿಸ/15ನೇವಿಸ/8ಅ/ಪ್ರ.ಸಂ.1012/2020, ದಿನಾಂಕ:05.12.2020.

*****

ಮೇಲ್ಕಂಡ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಹ್ಯಾರಿಸ್ ಎನ್.ಎ. ಇವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1012ಕ್ಕೆ (ದಿನಾಂಕ:11.12.2020ರಂದು ಉತ್ತರಿಸಬೇಕಾಗಿತ್ತು) ಸಂಬಂಧಿಸಿದ ಉತ್ತರದ 10 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಿದೆ.

ತಮ್ಮ ನಂಬುಗೆಯ,

(ಬಿ.ಎಸ್.ಮಂಜುನಾಥ್)
ಸರ್ಕಾರದ ಅಧೀನ ಕಾರ್ಯದರ್ಶಿ-1,
ಸಹಕಾರ ಇಲಾಖೆ.

L.D.
D-21-6-2021

## ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1012
2. ಸದಸ್ಯರ ಹೆಸರು : ಶ್ರೀ ಹ್ಯಾರಿಸ್ ಎನ್.ಎ.(ಶಾಂತಿನಗರ)
3. ಉತ್ತರಿಸಬೇಕಾದ ದಿನಾಂಕ : 11.12.2020
4. ಉತ್ತರಿಸುವ ಸಚಿವರು : ಸಹಕಾರ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಸರ್ಕಾರ ಎ.ಪಿ.ಎಂ.ಸಿ ಗಳ ಕಾರ್ಯನಿರ್ವಹಣೆಗೆ ಯಾವುದಾದರೂ ನಿಬಂಧನೆಗಳನ್ನು ನೂತನವಾಗಿ ವಿಧಿಸಲಾಗಿದೆಯೇ; ಆ ಕುರಿತಾದ ವಿವರಗಳೇನು; | ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಕಲಂ 8 ಹಾಗೂ ಕಲಂ 117ಕ್ಕೆ ದಿನಾಂಕ:31/12/2020 ರಂದು ಕಾಯ್ದೆಗೆ ಸಂಖ್ಯೆ:59/2020ರ ಮೂಲಕ ತಿದ್ದುಪಡಿ ಮಾಡಿ ಜಾರಿಗೆ ತರಲಾಗಿದೆ.<br><br>ದಿನಾಂಕ:02/01/2021ರ ಸರ್ಕಾರದ ಆದೇಶದಲ್ಲಿ ಮಾರುಕಟ್ಟೆ ಶುಲ್ಕ/ಬಳಕೆದಾರರ ಶುಲ್ಕದ ದರವನ್ನು ಶೇ.0.60ಕ್ಕೆ ನಿಗಧಿಪಡಿಸಿ ಆದೇಶಿಸಲಾಗಿರುತ್ತದೆ.<br><br>ಈ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ನಿಬಂಧನೆಗಳನ್ನು ವಿಧಿಸಿ ಮಾರುಕಟ್ಟೆ ಸಮಿತಿಗಳಿಗೆ ಸುತ್ತೋಲೆ ನಿರ್ದೇಶನಗಳನ್ನು ನೀಡಲಾಗಿದೆ.<br><br>• ಮಾರುಕಟ್ಟೆ ಸಮಿತಿಗಳು ಮತ್ತು ಇತರೆ ಕಛೇರಿಗಳಲ್ಲಿನ ವಾಹನಗಳ ಬಳಕೆ ವೆಚ್ಚವನ್ನು ಕಡಿಮೆಗೊಳಿಸುವುದು.<br>• ಮಾರುಕಟ್ಟೆ ಸಮಿತಿಗಳು ಮಾರುಕಟ್ಟೆ ಪ್ರಾಂಗಣದಲ್ಲಿ ಮೂಲಭೂತ ಸೌಕರ್ಯ, ಪ್ರಾಂಗಣ ನಿರ್ವಹಣೆ ಮತ್ತು ಸಮಿತಿ ಆಡಳಿತ ವೆಚ್ಚಗಳಿಗೆ ನಿಗಧಿಪಡಿಸಲಾದ ಮೊತ್ತದಲ್ಲೇ ಸಿಬ್ಬಂದಿ ಮತ್ತು ಸ್ವಚ್ಚತೆ ಕಾರ್ಯದ ವೆಚ್ಚಗಳನ್ನು ಭರಿಸಲು ಸೂಚನೆ ನೀಡಲಾಗಿದೆ.<br>• ಮಾರುಕಟ್ಟೆ ಸಮಿತಿಗಳಲ್ಲಿ ಹೆಚ್ಚುವರಿ ನಿಧಿ ಇದ್ದಲ್ಲಿ ಮಾತ್ರ 2020-21ನೇ ಸಾಲಿನ ವಾರ್ಷಿಕ ಕ್ರಿಯಾ ಯೋಜನೆಯಲ್ಲಿ ಮಂಜೂರಾತಿ ನೀಡಿರುವ ಕಾಮಗಾರಿಗಳ ಅವಶ್ಯಕತೆಯನ್ನು ಪರಿಶೀಲಿಸಿ ಕೊಂಡು ಅತ್ಯಾವಶ್ಯಕ ಕಾಮಗಾರಿಗಳನ್ನು ಮಾತ್ರ ಕೈಗೊಳ್ಳಲು ಕ್ರಮ ವಹಿಸಲು ಸೂಚನೆ ನೀಡಲಾಗಿದೆ. |

| | | |
|---|---|---|
| ಆ. | ಸರ್ಕಾರ ಮಾರುಕಟ್ಟೆ ಶುಲ್ಕ ವಸೂಲಾತಿ ಮಿತಿಗೊಳಿಸಿದೆಯೇ; ಹಾಗಿದ್ದಲ್ಲಿ, ಆ ಕುರಿತು ವಿವರಗಳೇನು; | ಕೇಂದ್ರ ಸರ್ಕಾರದ ಕಾಯ್ದೆ ಸಂ:21/2020-The Farmers' Produce Trade And Commerce (Promotion And Facilitation) Act, 2020 ರನ್ವಯ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳ ಅಧಿಕಾರವನ್ನು ಮಾರುಕಟ್ಟೆ ಪ್ರಾಂಗಣಕ್ಕೆ ಸೀಮಿತಗೊಳಿಸಿರುವುದರಿಂದ ಹಾಗೂ ಮಾರುಕಟ್ಟೆ ಪ್ರಾಂಗಣದ ಹೊರಗಿನ ವಹಿವಾಟು ಕೇಂದ್ರ ಸರ್ಕಾರದ ಕಾಯ್ದೆಯಡಿಯಲ್ಲಿ ಬರುವುದರಿಂದ ಅಲ್ಲಿ ಮಾರುಕಟ್ಟೆ ಶುಲ್ಕ ಇಲ್ಲದೆ ವಿನಾಯಿತಿ ಇದ್ದು, ರಾಜ್ಯ ಸರ್ಕಾರದ ಕಾಯ್ದೆಯಡಿ ವ್ಯವಹರಿಸುವ ಪೇಟೆ ಕಾರ್ಯಕರ್ತರು ತಮಗೂ ಸಮಾನ ಅವಕಾಶ ಕಲ್ಪಿಸುವಂತೆ ಸಲ್ಲಿಸಿದ್ದ ಮನವಿಗಳನ್ನು ಪರಿಶೀಲಿಸಿ ರಾಜ್ಯ ಸರ್ಕಾರವು ದಿನಾಂಕ:21/07/2020 ರಂದು ಮಾರುಕಟ್ಟೆ ಸಮಿತಿಗಳು ನಿಯಮಾನುಸಾರ ಆಕರಿಸುತ್ತಿದ್ದ ಮಾರುಕಟ್ಟೆ ಶುಲ್ಕ/ಬಳಕೆದಾರರ ಶುಲ್ಕದ ದರವನ್ನು ಶೇ.1.5 ರಿಂದ ಶೇ.1ಕ್ಕೆ ಇಳಿಸಿ ಆದೇಶಿಸಲಾಗಿರುತ್ತದೆ.<br><br>ತದನಂತರ ದಿ:04/08/2020 ರಂದು ರಾಜ್ಯ ಸರ್ಕಾರವು ಮನ: ಪರಿಶೀಲಿಸಿ ಮಾರುಕಟ್ಟೆ ಶುಲ್ಕ/ಬಳಕೆದಾರರ ಶುಲ್ಕದ ದರವನ್ನು ಶೇ.1 ರಿಂದ ಶೇ.0.35ಕ್ಕೆ ಇಳಿಸಿ ಆದೇಶಿಸಲಾಗಿರುತ್ತದೆ. ಮನ: ದಿನಾಂಕ:02/01/2021 ರಂದು ಸರ್ಕಾರವು ಮಾರುಕಟ್ಟೆ ಸಮಿತಿಗಳು ಆಕರಿಸುವ ಮಾರುಕಟ್ಟೆ ಶುಲ್ಕ/ಬಳಕೆದಾರರ ಶುಲ್ಕದ ದರವನ್ನು ಶೇ.0.60ಕ್ಕೆ ಮರು ಹಂಚಿಕೆ ಮಾಡಿ ಈ ಕೆಳಗಿನಂತೆ ನಿಗಧಿಪಡಿಸಿ ಆದೇಶಿಸಲಾಗಿರುತ್ತದೆ. |

| ಕ್ರ. ಸಂ | ಉದ್ದೇಶ | ಹಂಚಿಕೆ (ಪೈಸೆಗಳಲ್ಲಿ) |
|---|---|---|
| 1. | ಆವರ್ತ ನಿಧಿ | 10 |
| 2. | ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳಿಗೆ ವಂತಿಗೆ. | 05 |
| 3. | ಪ್ರಾಂಗಣದಲ್ಲಿ ಮೂಲಭೂತ ಸೌಕರ್ಯ ಕಲ್ಪಿಸಲು, ಪ್ರಾಂಗಣ ನಿರ್ವಹಣೆ ಮತ್ತು ಸಮಿತಿ ಆಡಳಿತ ವೆಚ್ಚ | 44 |
| 4 | ರೆಮ್ಸ್ ಸಂಸ್ಥೆಗೆ ವಹಿವಾಟು ಶುಲ್ಕ | 01 |
| | ಒಟ್ಟು | 60 |

| | | |
|---|---|---|
| ಇ. | ಎ.ಪಿ.ಎಂ.ಸಿಗಳ ಕಾರ್ಯ ನಿರ್ವಹಣೆಗೆ ಕಾಯ್ದೆ ತಿದ್ದುಪಡಿ ಮಾಡಿರುವುದರಿಂದ ಆದಾಯದಲ್ಲಿ ಕೊರತೆ ಉಂಟಾಗುವುದನ್ನು ಸರಿದೂಗಿಸಿ ಸಮಿತಿಗಳಲ್ಲಿನ ವರ್ತಕರು, ರೈತರು, ಪೇಟೆ ಕಾರ್ಯಕರ್ತರುಗಳಿಗೆ ಮೂಲ ಸೌಕರ್ಯಗಳನ್ನು ಕಲ್ಪಿಸುವಲ್ಲಿ ಈಗಿರುವ ಪ್ರಾಂಗಣಗಳ ಬಲವರ್ಧನೆಗೆ ಸರ್ಕಾರದ ಕ್ರಮಗಳೇನು? (ವಿವರಗಳನ್ನು ನೀಡುವುದು) | ದಿನಾಂಕ:02/01/2021ರಂದು ಸರ್ಕಾರವು ಮಾರುಕಟ್ಟೆ ಸಮಿತಿಗಳು ಆಕರಿಸುವ ಮಾರುಕಟ್ಟೆ ಶುಲ್ಕ/ಬಳಕೆದಾರರ ಶುಲ್ಕದ ದರವನ್ನು ರಾಜ್ಯ ಸಂಚಿತ ನಿಧಿಗೆ ಮಾರುಕಟ್ಟೆ ಶುಲ್ಕ/ಬಳಕೆದಾರರ ಶುಲ್ಕದಿಂದ ಯಾವುದೇ ವಂತಿಗೆಯನ್ನು ಪಡೆಯದೇ ಸರ್ಕಾರವೇ ಪೂರ್ತಿಯಾಗಿ ಭರಿಸುವ ಷರತ್ತಿಗೊಳಪಟ್ಟು ಶೇ.0.60ಕ್ಕೆ ನಿಗಧಿಪಡಿಸಿ ಆದೇಶಿಸಿದೆ. ಅದರಲ್ಲಿ ಶೇ.0.44 ರಷ್ಟು ಮೊತ್ತವನ್ನು ಪ್ರಾಂಗಣದಲ್ಲಿ ಮೂಲಭೂತ ಸೌಕರ್ಯ ಕಲ್ಪಿಸಲು, ಪ್ರಾಂಗಣ ನಿರ್ವಹಣೆ ಮತ್ತು ಸಮಿತಿ ಆಡಳಿತ ವೆಚ್ಚಕ್ಕೆ ನಿಗಧಿಪಡಿಸಲಾಗಿದೆ.<br><br>2020-21ನೇ ಸಾಲಿನ ಆಯವ್ಯಯದಲ್ಲಿ ಸರ್ಕಾರವು ಕೃಷಿ ಮಾರಾಟ ಇಲಾಖೆಗೆ ನಬಾರ್ಡ್ ಕಾಮಗಾರಿಗಳನ್ನು ಕೈಗೊಳ್ಳಲು ಕೆಳಕಂಡಂತೆ ಅನುದಾನ ಬಿಡುಗಡೆ ಮಾಡಲಾಗಿರುತ್ತದೆ.<br>1. ಆಯವ್ಯಯ ಅವಕಾಶ - ರೂ.141.54 ಕೋಟಿ.<br>2. ಮೊದಲನೇ ಹೆಚ್ಚುವರಿ (first additionality) - ರೂ.147.01 ಕೋಟಿ.<br>3. ಎರಡನೇ ಹೆಚ್ಚುವರಿ (second additionality) - ರೂ. 67.70 ಕೋಟಿ.<br>ಒಟ್ಟು - ರೂ.356.25 ಕೋಟಿ |

ಸಂಖ್ಯೆ:ಸಿಒ 617 ಎಂಆರ್ಇ 2020

(ಎಸ್.ಟಿ.ಸೋಮಶೇಖರ್)
ಸಹಕಾರ ಸಚಿವರು